- **Storyboarding** - Storyboards are graphic organizers such as a series of illustrations or images displayed in sequence for the purpose of pre-visualizing a motion picture, animation, motion graphic or Interactive media sequence, including website interactivity.
- **Tie Ratio** - It is defined as the ratio of the Installed base of consoles to the number of software sales in a market.
- **VFX** - Stands for Visual effects. It is the grouping of various processes by which imagery can be created without actually shooting for it live. It can also be used to enhance a live footage to exhibit sequences which would be impossible or not feasible to shoot live.

**Wire Removal** - Wire removal is a visual effects techniques used to remove wires in films, usually used as a safety precaution or to simulate flying in actors or minilatures.

**S. Raju**
Deputy Secretary Government
Department of Information Technology, Biotechnology
And Science & Technology

PR No. 309

**COMMERCE & INDUSTRIES SECRETARIAT**

**Sub :-** Formation of Special Investigation Team (SIT) to carry out further investigation - regarding.

**Read :-** Letter No: DMG/MLS/2011-12:5424 dated: 15/12/2011 of Director, Department of mines and Geology, Bangalore.

**Preamble:**

The State Government had referred several issues concerning Illegal Mining in the State, after framing comprehensive terms of reference to the Honb'le Lokayukta for investigation under Section 7 (2A) of Karnataka Lokayuktha Act 1984. The Hon'ble Lokayukta has submitted a detailed investigation report (Part-II) to the State Government on 27/07/2011 containing many chapters and annexure. The State Government constituted High Level Committee under the Chairmanship of the Additional Chief Secretary to advise the Government regarding ways and means of implementation of recommendations contained in the Hon'ble Lokayukta's report. The High Level Committee has submitted its final report to the State Government on 24/10/2011.

The High Level Committee in its report has recommended to constitute the Special Investigation Team (SIT) consisting of an interdisciplinary team of experts of the departments like Home, Mines and Geology, Commercial Tax, Forest, Revenue etc., or designate an appropriate agency to carry out further investigation wherever the Hon'ble Lokayukta has recommended for in-depth investigation in the matters like Illegal Mining, Illicit Extraction of Iron Ore and Transportation for Local Consumption and export, cases of benami transactions, Formation of Front Companies for the purpose of Evasion of Tax, Money Laundering and Parking of unaccounted wealth in tax havens.

The Government has agreed in principle to constitute Special Investigation Team as per recommendation of High Level Committee.

The Director, Mines and Geology in his letter dated: 15/12/2011 read at above (1) has requested to constitute Special Investigation Team.

The proposal has been examined in detail and decided to constitute Committee/Team. Hence, the following order:-

**Government Order No: CI.282:MMM.2011, Bangalore, Dated: 09/01/2012.**

In the circumstances explained in the preamble, the Government is pleased to constitute the following Special Investigation Team (SIT) to carry out further investigation in the matters like Illegal Mining, Illicit Extraction of Iron Ore and Transportation for Local Contruciton and export, cases of benami transactions, Formation of Front Companies for the purpose of Evasion of Tax, Money Laundering and Parking of unaccounted wealth in tax havens:-

| | | |
|---|---|---|
| 1. | Shri Deepak Sarmah, IFS,<br>Additional Principal Chief Conservator of Forest | Chairman |
| 2. | Shri Shivakumar, IPS.,<br>Inspector General of Police. (Fire Force) | Member |
| 3. | Shri H.R. Srinivas IAS.,<br>Director,<br>Department of Mines and Geology. | Member |
| 4. | Shri Amlan Adithya Biswas, IAS.,<br>Deputy Commissioner, Bellary. | Member |
| 5. | Shri J. Ramalinge Gowda,<br>Additional Commissioner<br>Department of Commercial Taxes. | Member |
| 6. | Shri Richard V.D'Souza,<br>Joint Commissioner (Admn),<br>Department of Transport. | Member |
| 7. | Shri D.R. Veeranna,<br>Additional Director (Mineral),<br>Department of Mines and Geology. | Convener |

The Special Investigation Team can co-opt any State government officer to be its member and may also invite any officer for the meetings, if it feels necessary to do so.

The Special Investigation Team shall look in to the issues enlisted in the Annexure and also investigate such issues that may be entrusted to it by the Govenrment from time to time.

The Special Investigation Team shall submit its report to the Government within a period of three months.

A separate Government order will be issued providing for a support team consisting of officers of different departments which will work under the Special Investigation Team directly.

By Order and in the name of the Governor of Karnataka
**M.V. Shivasubramani**
Under Secretary to Government (Mines)
Commerce & Industries Department

P.R. No: 326

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಯಾದಗಿರಿ ಜಿಲ್ಲೆಗೆ ವಿವಿಧ ವೃಂದದ ಹುದ್ದೆಗಳನ್ನು ಹೊಸದಾಗಿ ಸೃಜಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ/59/ಭೂದಾಪು 2008, ದಿನಾಂಕ: 26/12/2009.
2. ಸರ್ಕಾರದ ಆದೇಶ ಸಂಖ್ಯೆ: ವಾಕೈ 216/ಕೈಸೇವಿ/2009 (ಭಾಗ–1), ದಿನಾಂಕ: 19/05/2010.
3. ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರ ಸಂಖ್ಯೆ: ಆಡಳಿತ/ಸಿಬ್ಬಂದಿ–ಇ–2/112/2009–10, ದಿನಾಂಕ: 04/09/2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1) ರ ಆದೇಶದಲ್ಲಿ ಗುಲ್ಬರ್ಗಾ ಜಿಲ್ಲೆಯನ್ನು ವಿಭಜಿಸಿ. ಯಾದಗಿರಿ ಪಟ್ಟಣವನ್ನು ಕೇಂದ್ರಸ್ಥಾನವನ್ನಾಗಿಸಿ. ಹೊಸದಾಗಿ ಯಾದಗಿರಿ ಜಿಲ್ಲೆಯನ್ನು ರಚಿಸಿ. ದಿನಾಂಕ: 30/12/2009 ರಿಂದ ಜಾರಿಗೆ ಬರುವಂತೆ ಅಧಿಸೂಚನೆ ಹೊರಡಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ. (2) ರ ಆದೇಶದಲ್ಲಿ ಜಿಲ್ಲಾ ಕೈಗಾರಿಕಾ ಕೇಂದ್ರ ಯಾದಗಿರಿ ಕಚೇರಿಯ ರಾಜ್ಯವಲಯ/ಜಿಲ್ಲಾ ಪಂಚಾಯತ್ ವಲಯಗಳಿಗೆ Ad-hoc ಆಧಾರದ ಮೇಲೆ ಹುದ್ದೆಗಳನ್ನು ಸೃಜಿಸಿ/ಸ್ಥಳಾಂತರಿಸಿ, ಸರ್ಕಾರದ ಮಂಜೂರಾತಿ ನೀಡಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ. (3)ರ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ. ಬೆಂಗಳೂರು ಇವರು ಹೊಸದಾಗಿ ಸೃಜನೆಯಾಗಿರುವ ಯಾದಗಿರಿ ಜಿಲ್ಲೆಯ ಜಿಲ್ಲಾ ಕೈಗಾರಿಕಾ ಕೇಂದ್ರ ಕಚೇರಿಗೆ ಈ ಕೆಳಕಂಡ ಹುದ್ದೆಗಳನ್ನು ಹೊಸದಾಗಿ ಸೃಜಿಸಿ ಮಂಜೂರು ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

| ಕ್ರಮ ಸಂಖ್ಯೆ | ಹುದ್ದೆ | ವೃಂದ | ಅಧಿಕಾರಿಗಳ ಮತ್ತು ನೌಕರರ ಸಂಖ್ಯೆ | ಹೊಸದಾಗಿ ಸೃಜಿಸಿರುವ/ಸೃಜಿಸುವ ಹುದ್ದೆಗಳು |
|---|---|---|---|---|
| 1. | ಅಧೀಕ್ಷಕರು | ಸಿ | 1 | 1 |
| 2. | ಪ್ರಥಮ ದರ್ಜೆ ಸಹಾಯಕರು | ಸಿ | 1 | 1 |
| 3. | ಶಿಘ್ರಲಿಪಿಗಾರರು | ಸಿ | 1 | 1 |
| 4. | ಡಿ ದರ್ಜೆ | ಡಿ | 2 | 2 |
| ಒಟ್ಟು | | | 5 | 5 |

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 216 ಕೈಸೇವಿ 2009 (ಭಾಗ–2) ಬೆಂಗಳೂರು, ದಿನಾಂಕ: 9/01/2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹೊಸದಾಗಿ ರಚಿಸಿರುವ ಯಾದಗಿರಿ ಜಿಲ್ಲೆಯ ಜಿಲ್ಲಾ ಕೈಗಾರಿಕಾ ಕೇಂದ್ರ ಕಚೇರಿಗೆ ಈ ಕೆಳಕಂಡ ವಿವಿಧ ವೃಂದದ ಹುದ್ದೆಗಳನ್ನು ಸೃಜಿಸಲು ಹಾಗೂ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಸದರಿ ಹುದ್ದೆಗಳನ್ನು ಭರ್ತಿ ಮಾಡಲು ಪ್ರಸ್ತುತ ಜಾರಿಯಲ್ಲಿರುವ ಆರ್ಥಿಕ ಮಿತವ್ಯಯ ಆದೇಶವನ್ನು ಸಡಿಲಿಸಿ ಸರ್ಕಾರವು ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಅಧೀಕ್ಷಕ | 01 |
| 2. | ಪ್ರಥಮ ದರ್ಜೆ ಸಹಾಯಕ | 01 |
| 3. | ಶೀಘ್ರಲಿಪಿಗಾರ | 01 |
| 4. | ಗ್ರೂಪ್ 'ಡಿ' | 01 |
| ಒಟ್ಟು | | 04 |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1682 ವೆಚ್ಚ–1 2011, ದಿನಾಂಕ: 20/12/2011ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಲ್.ಎಸ್. ವಾಸನ್**
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
(ಸೇವೆಗಳು)

ಪಿ.ಆರ್: 327

## ಇಂಧನ ಸಚಿವಾಲಯ

**ವಿಷಯ :** ಮೆ:: ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗಿರುವ 30.60 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 1.7 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಗೋಲ್ಡನ್ ಹ್ಯಾಚರೀಸ್‌ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇನ್ 337 ಎನ್‌ಸಿಇ 2006, ದಿನಾಂಕ: 16/10/2006.
2. ಸರ್ಕಾರಿ ಆದೇಶ ಸಂಖ್ಯೆ: ಇನ್ 09 ಎನ್‌ಸಿಇ 2007, ದಿನಾಂಕ: 12/01/2007.
3. ಸರ್ಕಾರಿ ಆದೇಶ ಸಂಖ್ಯೆ: ಇನ್ 432 ಎನ್‌ಸಿಇ 2010, ದಿನಾಂಕ: 16/12/2010.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 318 ಎನ್‌ಸಿಇ 2011, ದಿನಾಂಕ: 26/07/2011.
5. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/GH-1.7(GNS-32&33)/RSR/2011/4500, ದಿನಾಂಕ: 30/11/2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ಸರ್ಕಾರಿ ಆದೇಶದಲ್ಲಿ ಮೆ: ಆರ್. ಶ್ರೀ ರಾಮುಲು ರೆಡ್ಡಿ ಮತ್ತು ಕೋ ಕಂಪನಿಗೆ ದಾವಣಗೆರೆ, ಬಳ್ಳಾರಿ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ 63 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರಿ ಆದೇಶದಲ್ಲಿ ಮೆ: ಆರ್. ಶ್ರೀ ರಾಮುಲು ರೆಡ್ಡಿ ಮತ್ತು ಕೋ ಹೆಸರನ್ನು ಮೆ: ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಅನುಮತಿಸಿರುವ ಒಟ್ಟು ಸಾಮರ್ಥ್ಯದಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ಅನುಮತಿಸಿರುವ ಆಂಶಿಕ ಸಾಮರ್ಥ್ಯವಾಗಿರುವ 7 ಮೆ.ವ್ಯಾ. ಸಾಮರ್ಥ್ಯವನ್ನು 30.60 ಮೆ.ವ್ಯಾ.ಗೆ 25 ಮೆ.ವ್ಯಾ. ವಿದ್ಯುತ್ತನ್ನು ರಾಜ್ಯದ ಗ್ರಿಡ್‌ಗೆ ಸರಬರಾಜು ಮಾಡತಕ್ಕದ್ದು ಹಾಗು ಈ ಯೋಜನೆಯನ್ನು ದಿ: 31/3/2011ರೊಳಗೆ ಅನುಷ್ಠಾನಗೊಳಿಸತಕ್ಕದ್ದೆಂಬ ಷರತ್ತಿಗೊಳಪಟ್ಟು ಹೆಚ್ಚಿಸಲು ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಅನುಮೋದನೆ ನೀಡಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಈ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ: 31/12/2011 ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಆರ್‌ಎಸ್‌ಆರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಬೆಳಗಾವಿ ಜಿಲ್ಲೆಯಲ್ಲಿ ಅನುಷ್ಠಾನ ಮಾಡಲು ಅನುಮತಿಸಿರುವ 30.60 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 1.7 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಗೋಲ್ಡನ್ ಹ್ಯಾಚರೀಸ್ ಕಂಪನಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಯೋಜನೆಯು ಖಾಸಗಿ ಜಮೀನಿನಲ್ಲಿ ಬರುತ್ತದೆ ಮತ್ತು ಈ ಯೋಜನೆಯನ್ನು ದಿನಾಂಕ: 31/12/2011ಕ್ಕೆ ಅನುಷ್ಠಾನಗೊಳಿಸಲಾಗುವುದೆಂದು ಸಹ ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 446 ಎನ್‌ಸಿಇ 2011, ಬೆಂಗಳೂರು, ದಿನಾಂಕ: 10/01/2012**

ಮೆ:: ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಬೆಳಗಾವಿ ಜಿಲ್ಲೆಯಲ್ಲಿ ಅನುಷ್ಠಾನ ಮಾಡಲು ಅನುಮತಿಸಿರುವ 30.60 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ **1.7 ಮೆ.ವ್ಯಾ.** ಸಾಮರ್ಥ್ಯದ ಯೋಜನೆಯನ್ನು ಮೆ:: ಗೋಲ್ಡನ್ ಹ್ಯಾಚರೀಸ್ ಕಂಪನಿಯವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ವರ್ಗಾಯಿಸಲಾಗಿದೆ:–**

**Schedule**

| Lacation and District | Description |
|---|---|
| Nej village, Chikkodi Taluk,<br>Belgaum District. | The identified potential comprises of two areas and mixture of hill and plains. Area A is spread N-E direction of Shiragaon. Whereas Area B is located in South of Girgaon and is spread in E-W directions.<br>The Geographical co-oridinates of Area-A & Area-B are as follows:-<br>Area-A:<br>Latitude: 16°27'32" - 16°30'0" N<br>Longitude: 74°31'06" - 74°32'57" E<br>Ridge peaks: 620 & 647m AMSL.<br>Area – B:<br>Latitude: 16°25'52" - 16°26'41" N<br>Longitude: 74°30'52" - 74°32'41" E<br>Ridge peaks: 720m AMSL.<br>Toposheet: 47 L/11 |

Land details of the project

| Village Name | Taluk & District | MW | Land Sy.No | No. of WTGs | Extent in land (Acres) | WTG Locati on No. |
|---|---|---|---|---|---|---|
| Nej | Chikkodi / Belgaum | 0.85 | 412/4 & 412/5 | 1 No. | 2 Acres | GNS 32 |
| Nej | | 0.85 | 403/1 | 1 No. | 2 Acres | GNS 33 |
| **Total** | | **1.70** | | **2 Nos.** | **4 Acres** | |

1. **ಮೆ:: ಗೋಲ್ಡನ್ ಹ್ಯಾಚರೀಸ್** ರವರು ಇತ್ತೀಚಿನ ಆದೇಶದನ್ವಯ ಕೆ.ಆರ್.ಇ.ಡಿ.ಎಲ್. ರವರೊಂದಿಗೆ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. ಸದರಿ ಯೋಜನೆಯನ್ನು ದಿನಾಂಕ: 31/01/2012 ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (commitment letter).
3. **ಮೆ:: ಗೋಲ್ಡನ್ ಹ್ಯಾಚರೀಸ್** ರವರು ವಿದ್ಯುತ್ ಖರೀದಿ ಒಪ್ಪಂದವನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ ಇವರೊಂದಿಗೆ ಮಾಡಿಕೊಳ್ಳತಕ್ಕದ್ದು.
4. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್. ಬಿ. ಕೃಷ್ಣಪ್ಪನವರ್**

ಪಿ.ಆರ್: 328

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ,

## ಇಂಧನ ಸಚಿವಾಲಯ

**ವಿಷಯ :** ವಿತರಣಾ ಕಂಪನಿಗಳಿಗೆ ವಿದ್ಯುತ್ ಹಂಚಿಕೆ

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇನ್‌ಎನ್ 45 ಪಿಎಸ್‌ಆರ್ 2006, ದಿನಾಂಕ: 22/04/2006.
2. ಪತ್ರ ಸಂಖ್ಯೆ: ಇಎನ್ 70 ಇಎಮ್‌ಸಿ 2009, ದಿನಾಂಕ: 10/11/2009.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 126 ಇಎಮ್‌ಸಿ 2010, ದಿನಾಂಕ: 24/03/2010.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 126 ಇಎಮ್‌ಸಿ 2010, ದಿನಾಂಕ: 12/10/2011.
5. ಸರ್ಕಾರಿ ಆದೇಶ ಸಂಖ್ಯೆ: ಇಎನ್ 81 ಇಎಮ್‌ಸಿ 2010, ದಿನಾಂಕ: 03/11/2011.

**ಪ್ರಸ್ತಾವನೆ:–**

ರಾಜ್ಯ ಸರ್ಕಾರವು ಆದೇಶ ಸಂಖ್ಯೆ ಇಎನ್ 126 ಇಎಂಸಿ 2010 ದಿನಾಂಕ: 24/03/2010ರಲ್ಲಿ ತಿಳಿಸಿರುವಂತೆ, ರಾಜ್ಯದಲ್ಲಿ ವಿವಿಧ ಮೂಲಗಳಿಂದ ನಿತ್ಯ ಲಭ್ಯವಿರುವ ಒಟ್ಟಾರೆ ವಿದ್ಯುತ್ ಪ್ರಮಾಣದಲ್ಲಿ ಎಲ್ಲಾ ವಿತರಣಾ ಕಂಪನಿಗಳಿಗೆ ಕೆಳಕಂಡಂತೆ ಶೇಕಡಾವಾರು ಪ್ರಮಾಣದಲ್ಲಿ ವಿದ್ಯುತ್ ಹಂಚಿಕೆ ಮಾಡಲಾಗಿರುತ್ತದೆ.

| ವಿತರಣಾ ಕಂಪನಿ | ಶೇಕಡಾವಾರು ವಿದ್ಯುತ್ ಹಂಚಿಕೆ ಪ್ರಮಾಣ |
|---|---|
| ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 49.62 |
| ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | 8.33 |
| ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 18.18 |
| ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 13.26 |
| ಚಾಮುಂಡೇಶ್ವರಿ ವಿದ್ಯುತ್ ನಿಗಮ ನಿಯಮಿತ | 10.61 |
| ಒಟ್ಟು | 100.00 |

ವಿತರಣಾ ಕಂಪನಿಗಳಿಗೆ ವಿದ್ಯುತ್ ಹಂಚಿಕೆ ಪ್ರಮಾಣವನ್ನು ಕಂಪನಿಗಳು ನಿತ್ಯ ಬಳಸುವ ಸರಾಸರಿ ವಿದ್ಯುತ್ ಪ್ರಮಾಣವನ್ನು ಗಮನದಲ್ಲಿಟ್ಟುಕೊಂಡು ಹಂಚಿಕೆ ಮಾಡಲಾಗಿರುತ್ತದೆ. ಪ್ರತಿ ವರ್ಷದ ವಿದ್ಯುತ್ ಬಳಕೆಯ ಪ್ರಮಾಣಲ್ಲಿ ಸರಾಸರಿ ಶೇ. 8 ರಷ್ಟು ಬೆಳವಣಿಗೆ ಕಂಡುಬಂದಿರುತ್ತದೆ. ಮತ್ತು ಋತುಮಾನ ಬದಲಾವಣೆಗಳಿಂದಾಗಿ ಕೆಲವು ವಿತರಣಾ ಕಂಪನಿಗಳಲ್ಲಿ ಹಂಚಿಕೆ ಮತ್ತು ಬಳಕೆ ಪ್ರಮಾಣದಲ್ಲಿ ವ್ಯತ್ಯಾಸ ಕಂಡು ಬಂದಿರುತ್ತದೆ. ಇತ್ತೀಚಿನ ಸರ್ಕಾರಿ ಆದೇಶ ಸಂಖ್ಯೆ: ಇಎನ್ 126 ಇಎಂಸಿ 2010 ದಿನಾಂಕ: 12/10/2011ರಲ್ಲಿ ತಿಳಿಸಿರುವಂತೆ ವಿದ್ಯುತ್ ಸರಬರಾಜು ಕಂಪನಿಗಳು ವಿವಿಧ ಮೂಲಗಳಿಂದ ಖರೀದಿಸುವ ವಿದ್ಯುತ್ತಿನ ಪ್ರಮಾಣವನ್ನು ಮರು ಹಂಚಿಕೆ ಮಾಡಲಾಗಿರುತ್ತದೆ. ಇದರ ಉದ್ದೇಶವು ವಿವಿಧ ಕಂಪನಿಗಳ ಆರ್ಥಿಕ ಹೊರೆಯನ್ನು ಸರಿದೂಗಿಸಿ, ರಾಜ್ಯದ ವಿವಿಧ ಭಾಗಗಳಲ್ಲಿರುವ ಗ್ರಾಹಕರ ಹಿತಾಸಕ್ತಿಯನ್ನು ಕಾಪಾಡುವ ದೃಷ್ಟಿಯಿಂದ KERC ಯವರ ಸೂಚನೆ ಮೇರೆಗೆ ಮರು ಹಂಚಿಕೆ ಮಾಡಲಾಗಿದೆ. ಈ ಮರು ಹಂಚಿಕೆ ಪ್ರಮಾಣವು ಕಂಪನಿಗಳು ವಿವಿಧ ಮೂಲಗಳಿಂದ ವಿದ್ಯುತ್ ಖರೀದಿಸುವ ಬಿಲ್ ಪಾವತಿ ಉದ್ದೇಶಕ್ಕಾಗಿ ಮಾತ್ರ ಬಳಸಬಹುದಾಗಿದೆ. ಈ ಸಂಬಂಧವಾಗಿ ವಿವಿಧ ಮೂಲಗಳ ವಿದ್ಯುತ್ ಖರೀದಿಸುವ ಪ್ರಮಾಣ ಮತ್ತು ನಿತ್ಯ ವಿದ್ಯುತ್ ಬಳಕೆಯ ಪ್ರಮಾಣದಲ್ಲಿ, ವ್ಯತ್ಯಾಸ ಕಂಡು ಬಂದಿದ್ದು, ಈ ಅಸಮತೋಲವನ್ನು ಸರಿಪಡಿಸುವ ಉದ್ದೇಶದಿಂದ ವಿದ್ಯುತ್ ಸರಬರಾಜು ಕಂಪನಿಗಳಿಗೆ ದಿನನಿತ್ಯದ ವಿದ್ಯುತ್ ಹಂಚಿಕೆ ಪ್ರಮಾಣದಲ್ಲಿ ಮಾರ್ಪಾಡು ಮಾಡಬೇಕೆಂಬ ಅಂಶವನ್ನು ಮನಗಾಣಲಾಯಿತು. ಅದರಂತೆ ವಿವಿಧ ವಿದ್ಯುತ್ ಸರಬರಾಜು ಕಂಪನಿಗಳಿಗೆ ನಿತ್ಯ ವಿದ್ಯುತ್ ಬಳಕೆಯ ಉದ್ದೇಶದಿಂದ ರಾಜ್ಯದಲ್ಲಿ ಒಟ್ಟಾರೆ ಲಭ್ಯವಿರುವ (ಕಂಪನಿಗಳ ಖರೀದಿ ಹೊರತುಪಡಿಸಿ) ವಿದ್ಯುತ್ ಪ್ರಮಾಣವನ್ನು ಆಧರಿಸಿ ಆದೇಶ ಸಂಖ್ಯೆ: ಇಎನ್ 81 ವಿಎಸ್‌ಸಿ 2011ರ ಪ್ರಕಾರ ಕೆಳಕಂಡಂತೆ ಮರು ಹಂಚಿಕೆ ಮಾಡಲಾಯಿತು.

| ವಿತರಣಾ ಕಂಪನಿ | ಶೇಕಡಾವಾರು ವಿದ್ಯುತ್ ಹಂಚಿಕೆ ಪ್ರಮಾಣ |
|---|---|
| ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 49.00 |
| ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | 8.33 |
| ಚಾಮುಂಡೇಶ್ವರಿ ವಿದ್ಯುತ್ ನಿಗಮ ನಿಯಮಿತ | 10.65 |
| ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 18.50 |
| ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 13.52 |
| ಒಟ್ಟು | 100.00 |

ವಿತರಣಾ ಕಂಪನಿಗಳ ವಿದ್ಯುಚ್ಛಕ್ತಿ ಬಳಕೆ ಪ್ರಮಾಣವು ಬೇಸಿಗೆ ತಿಂಗಳುಗಳಲ್ಲಿ ಏರುಗತಿಯಲ್ಲಿ ಸಾಗುತ್ತಿದ್ದು, ಹಿಂದಿನ ಹಂಚಿಕೆ ಪ್ರಮಾಣವನ್ನು ಮರು ಹಂಚಿಕೆ ಮಾಡಲು ವಿತರಣಾ ಕಂಪನಿಗಳು ಕೋರಿಕೆಯನ್ನು ಸಲ್ಲಿಸಿರುತ್ತವೆ. ವಿತರಣಾ ಕಂಪನಿಗಳ ವಿದ್ಯುತ್ ಬಳಕೆ ಪ್ರಮಾಣವು ಋತುಮಾನ ಆಧರಿಸಿ ಬದಲಾವಣೆಯಾಗುವ ಅಂಶವನ್ನು ಪರಿಗಣಿಸಿ ಪ್ರತಿ ತ್ರೈಮಾಸಿಕ ಬಳಕೆ ಪ್ರಮಾಣವನ್ನು ನಿರ್ಧರಿಸಿ ಹಂಚಿಕೆ ಮಾಡುವುದು ಸೂಕ್ತವಾಗುವುದೆಂಬ ನಿಟ್ಟಿನಲ್ಲಿ ಹಂಚಿಕೆ ಪ್ರಮಾಣವನ್ನು ಮರು ಪರಿಶೀಲಿಸಲಾಯಿತು. ಅದರಂತೆ ವಿತರಣಾ ಕಂಪನಿಗಳು ಕಳೆದ ಮೂರು ವರ್ಷಗಳ (2009ರಿಂದ 2011ರ ವರೆಗೆ) ಜನವರಿಯಿಂದ ಮಾರ್ಚ್ ವರೆಗಿನ ತಿಂಗಳಿನಲ್ಲಿ ಬಳಸಿದ ವಿದ್ಯುತ್ ಪ್ರಮಾಣದ ಸರಾಸರಿ ಬಳಕೆಯನ್ನು ಲೆಕ್ಕಚಾರ ಮಾಡಲಾಗಿದೆ. ಈ ಸರಾಸರಿ ಆಧಾರದ ಹಂಚಿಕೆ ಪ್ರಮಾಣವು ರಾಜ್ಯದ ದಿನ ನಿತ್ಯದ ಒಟ್ಟಾರೆ ಎಲ್ಲಾ ಮೂಲಗಳಿಂದ ದೊರಕುವ ವಿದ್ಯುತ್ ಪ್ರಮಾಣದಲ್ಲಿ ವಿತರಣಾ ಕಂಪನಿವಾರು ಹಂಚಿಕೆ ಮಾಡಬಹುದಾಗಿದೆ.

ಅದರಂತೆ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 81 ವಿಎಸ್‌ಸಿ 2011 ಬೆಂಗಳೂರು, ದಿನಾಂಕ: 11/01/2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸಂದರ್ಭದಲ್ಲಿ ಸರ್ಕಾರವು ವಿತರಣಾ ಕಂಪನಿಗಳಿಗೆ ಈ ಕೆಳಕಂಡಂತೆ ಶೇಕಡಾವಾರು ವಿದ್ಯುಚ್ಛಕ್ತಿ ಪ್ರಮಾಣವನ್ನು ಈ ಅದೇಶದಲ್ಲಿ ತಿಳಿಸಿರುವ ನಿಬಂಧನೆಗೊಳಪಟ್ಟು ಮರು ಹಂಚಿಕೆ ಮಾಡಲಾಗಿರುತ್ತದೆ.

| ವಿತರಣಾ ಕಂಪನಿ | ಶೇಕಡಾವಾರು ವಿದ್ಯುತ್ ಹಂಚಿಕೆ ಪ್ರಮಾಣ |
|---|---|
| ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 47.88 |
| ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | 8.46 |
| ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 19.35 |
| ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 13.72 |
| ಚಾಮುಂಡೇಶ್ವರಿ ವಿದ್ಯುತ್ ನಿಗಮ ನಿಯಮಿತ | 10.59 |
| ಒಟ್ಟು | 100.00 |

ನಿಬಂಧನೆಗಳು:

1. ಈ ಆದೇಶವು 11/01/2012 ರಿಂದ ಜಾರಿಗೆ ಬರಲಿದೆ ಹಾಗೂ ಮುಂದಿನ ಆದೇಶದ ವರೆಗೂ ಜಾರಿಯಲ್ಲಿರುತ್ತದೆ.
2. ಈ ಶೇಕಡಾವಾರು ವಿದ್ಯುತ್ ಹಂಚಿಕೆ ಪ್ರಮಾಣವು ಮುಂಬರುವ ಎಲ್ಲಾ ಹೊಸ ದೀರ್ಘಾವಧಿ ವಿದ್ಯುತ್ ಯೋಜನೆಗಳಿಂದ ಲಭ್ಯವಿರುವ ವಿದ್ಯುತ್ ಪ್ರಮಾಣಕ್ಕೆ ಅನ್ವಯಿಸುತ್ತದೆ.
3. ಈ ಹಂಚಿಕೆ ಪ್ರಮಾಣವು ರಾಜ್ಯದಲ್ಲಿ ಸ್ಥಾಪಿಸಲಾಗಿರುವ ಎಲ್ಲಾ ಸಾಂಪ್ರದಾಯಿಕ ವಿದ್ಯುತ್ ಮೂಲಗಳು, ಕೇಂದ್ರೀಯ ವಿದ್ಯುತ್ ಘಟಕಗಳು ಬೃಹತ್ ಸ್ವತಂತ್ರ ವಿದ್ಯುತ್ ಉತ್ಪಾದಕರುಗಳಿಂದ ನಿತ್ಯ ಲಭ್ಯವಿರುವ ವಿದ್ಯತ್ ಪ್ರಮಾಣವನ್ನು ಆಧರಿಸಿರುತ್ತದೆ. ವಿತರಣಾ ಕಂಪನಿಗಳು ಸ್ವತಂತ್ರವಾಗಿ ಖರೀದಿ ಮಾಡುವ ಅಲ್ಪಾವಧಿ ವಿದ್ಯುತ್ ಪ್ರಮಾಣವು ಈ ಹಂಚಿಕೆಯಲ್ಲಿ ಸೇರಿರುವುದಿಲ್ಲ.
4. ಈ ಶೇಕಡಾವಾರು ಹಂಚಿಕೆ ಪ್ರಮಾಣವು ಅಸಂಪ್ರದಾಯಿಕ ಇಂಧನ ಮೂಲಗಳ ವಿದ್ಯುಚ್ಛಕ್ತಿಗೆ ಅನ್ವಯಿಸುವುದಿಲ್ಲ.
5. ಈ ಶೇಕಡಾವಾರು ಹಂಚಿಕೆ ಪ್ರಮಾಣವನ್ನು ವಿತರಣಾ ಕಂಪನಿಗಳು ವಿದ್ಯುತ್ ಖರೀದಿ ಒಪ್ಪಂದ (PPA) ದ ಮೂಲಕ ಇತರೆ ಮೂಲಗಳಿಂದ ಖರೀದಿಸಿ ಬೇರೆಯಾಗಿ ಹಣ ಪಾವತಿ ಮಾಡುತ್ತಿರುವ ವಿದ್ಯುಚ್ಛಕ್ತಿ ಪ್ರಮಾಣವನ್ನು ಹೊರತುಪಡಿಸಿ ನಿಗದಿಪಡಿಸಲಾಗಿದೆ.
6. ಈ ಶೇಕಡಾವಾರು ಹಂಚಿಕೆಯು ವಿತರಣಾ ಕಂಪನಿಗಳು ಬಳಕೆಮಾಡದಿರುವ Wheeled energy ಗೆ ಅನ್ವಯಿಸುವುದಿಲ್ಲ.
7. ಈ ಆದೇಶವನ್ನು ದೈನಂದಿನ ಲಭ್ಯವಿರುವ ವಿದ್ಯುತ್ತನ್ನು ಹಂಚಿಕೆ ಮಾಡಲು ಪಾಲಿಸಬೇಕಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸರೇಶ್.ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್: 329 ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ:: ಗೋಕಾಕ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ (ಗೋಕಾಕ್ ಮಿಲ್ಸ್ ವಿಭಾಗ) ರವರ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಗೋಕಾಕ್ ಕಿರು ಜಲ ವಿದ್ಯುತ್ ಯೋಜನೆಯನ್ನು 8.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 88 ಎನ್‌ಸಿಇ 2007, ದಿನಾಂಕ: 07/08/2007.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/SH-2/ಗೋಕಾಕ್ ಫಾಲ್ಸ್ ಎಂಹೆಚ್‌ಎಸ್/1381, ದಿನಾಂಕ: 12/16.05.2011 ಮತ್ತು ಕೆಆರ್‌ಇಡಿ/06/SH-2/ಗೋಕಾಕ್‌ಫಾಲ್ಸ್/2011/4276, ದಿನಾಂಕ: 03/04/11/2011.

**ಪ್ರಸ್ತಾವನೆ:-**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ:: ಫೋರ್ಬ್ಸ್ ಗೋಕಾಕ್ ಲಿಮಿಟೆಡ್ ಕಂಪನಿಗೆ ಬೆಳಗಾಂ ಜಿಲ್ಲೆಯ ಗೋಕಾಕ್ ಫಾಲ್ಸ್‌ನಲ್ಲಿ ಅನುಷ್ಠಾನ ಮಾಡಲು ಅನುಮತಿಸಲಾದ 3.5 ಮೆಗಾ ವ್ಯಾಟ್ ಸಾಮರ್ಥ್ಯದ ಗೋಕಾಕ್ ಫಾಲ್ಸ್ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 4.5 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ: ಗೋಕಾಕ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ (ಗೋಕಾಕ್ ಮಿಲ್ಸ್ ವಿಭಾಗ) ಸಂಸ್ಥೆಯ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಗೋಕಾಕ್ ಫಾಲ್ಸ್ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 8.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವಂತೆ ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ

ಶಿಫಾರಸ್ಸು ಮಾಡಿರುತ್ತಾರೆ ಹಾಗೂ ಕರ್ನಾಟಕ ವಿದ್ಯುತ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯೋಜನೆಗೆ ಸದರಿ ಯೋಜನೆಯಿಂದ ಯಾವುದೇ ಭಾದಕವಿರುವುದಿಲ್ಲವೆಂದು ತಿಳಿಸಿರುತ್ತಾರೆಂದು ವರದಿ ಮಾಡಿರುತ್ತಾರೆ.

ಆದುದರಿಂದ, ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 507 ಎನ್‌ಸಿಇ 2010, ಬೆಂಗಳೂರು, ದಿನಾಂಕ: 10/01/2012.**

ಮೆ:: ಗೋಕಾಕ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ (ಗೋಕಾಕ್ ಮಿಲ್ಸ್ ವಿಭಾಗ) ಕಂಪನಿಗೆ ಬೆಳಗಾವಿ ಜಿಲ್ಲೆಯ ಗೋಕಾಕ್ ಫಾಲ್ಸ್‌ನಲ್ಲಿ ಅನುಷ್ಠಾನ ಮಾಡಲು ಅನುಮತಿಸಲಾದ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಗೋಕಾಕ್ ಫಾಲ್ಸ್ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 4.5 ಮೆಗಾ ವ್ಯಾಟ್ ನಿಂದ 8.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

1. ಮೆ:: ಗೋಕಾಕ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ರವರು 45 ದಿನಗಳ ಒಳಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸರೇಶ್.ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್: 330

## ಇಂಧನ ಸಚಿವಾಲಯ

**ವಿಷಯ :** ಮೆ. ವೆಸ್ಟಾಸ್ ವಿಂಡ್ ಟೆಕ್ನಾಲಜಿ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಮತ್ತು ಅದರ ಸಮೂಹ ಕಂಪನಿಗಳಿಗೆ ಹಂಚಿಕೆಯಾಗಿರುವ ಪವನ ವಿದ್ಯುತ್ ಯೋಜನೆ ಸಾಮರ್ಥ್ಯದಲ್ಲಿ 102.75 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಇಂಇ 124 ಎನ್‌ಸಿಇ 2002, ದಿನಾಂಕ: 31–05–2002.
2) ಸರ್ಕಾರದ ಆದೇಶ ಸಂಖ್ಯೆ: ಡಿಇ 124 ಎನ್‌ಸಿಇ 2002, ದಿನಾಂಕ: 05–03–2003.
3) ಸರ್ಕಾರದ ಆದೇಶ ಸಂಖ್ಯೆ: ಇಎನ್ 210 ಎನ್‌ಸಿಇ 2005, ದಿನಾಂಕ: 20–08–2005.
4) ಸರ್ಕಾರದ ಆದೇಶ ಸಂಖ್ಯೆ: ಇಎನ್ 463 ಎನ್‌ಸಿಇ 2006, ದಿನಾಂಕ: 22–12–2006.
5) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/VWTIPL-102.75 MW/2011/4380, ದಿನಾಂಕ: 21/23–11–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ ಮೆ: ಚಿತ್ರದುರ್ಗ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ (ಚಿತ್ರದುರ್ಗ ಜಿಲ್ಲೆಯಲ್ಲಿ 46 ಮೆ/ವ್ಯಾ) ಮತ್ತು (ದಾವಣಗೆರೆ ಜಿಲ್ಲೆಯಲ್ಲಿ 21 ಮೆ.ವ್ಯಾ) ಒಟ್ಟು 67 ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಸರ್ಕಾರಿ ಆದೇಶದಲ್ಲಿ ಮೆ: ಚಿತ್ರದುರ್ಗ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ (ಶಿವಮೊಗ್ಗ ಜಿಲ್ಲೆಯಲ್ಲಿ 15 ಮೆ.ವ್ಯಾ) ಮತ್ತು (ಗದಗ ಜಿಲ್ಲೆಯಲ್ಲಿ 24 ಮೆ.ವ್ಯಾ) ಒಟ್ಟು 39 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಸರ್ಕಾರಿ ಆದೇಶದಲ್ಲಿ ಮೆ. ಎನ್.ಇ.ಜಿ.– ಮೈಕಾನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿ ಚನ್ನೈ ಇವರಿಗೆ ಬಾಗಲಕೋಟೆ, ರಾಯಚೂರು, ಬೀದರ್, ಬಿಜಾಪುರ ಮತ್ತು ಗುಲ್ಬರ್ಗಾ ಜಿಲ್ಲೆಗಳ ವಿವಿಧ ಸ್ಥಳಗಳಲ್ಲಿ ಒಟ್ಟು 99.75 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಸರ್ಕಾರಿ ಆದೇಶದಲ್ಲಿ ಮೆ. ಎನ್.ಇ.ಜಿ.– ಮೈಕಾನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ: ವೆಸ್ಟಾಸ್ ವಿಂಡ್ ಟೆಕ್ನಾಲಜಿ (ಇಂಡಿಯಾ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಲಾಗಿತ್ತು.

ಮೆ. ವೆಸ್ಟಾಸ್ ವಿಂಡ್ ಟೆಕ್ನಾಲಜಿ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿ ಹಾಗೂ ಅದರ ಸಮೂಹ ಕಂಪನಿಗೆ ವಿವಿಧ ಆದೇಶಗಳಲ್ಲಿ ಹಂಚಿಕೆಯಾಗಿರುವ ಒಟ್ಟು ಸಾಮರ್ಥ್ಯದಲ್ಲಿ ಈ ಕೆಳಕಂಡ ಕೋಷ್ಟಕದಲ್ಲಿ ನಮೂದಿಸಿರುವ ಸ್ಥಳವು ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಯೋಗ್ಯವಿರುವುದಿಲ್ಲವಾದ್ದರಿಂದ ಈ ಸಾಮರ್ಥ್ಯವನ್ನು ಸರ್ಕಾರಕ್ಕೆ ಅಧ್ಯರ್ಪಿಸಲು ಸಿದ್ದರಿರುವುದಾಗಿ ತಿಳಿಸಿರುವುದರಿಂದ, ಅಭಿವೃದ್ಧಿದಾರರ ಕೋರಿಕೆಯನ್ನು ಪರಿಗಣಿಸುವಂತೆ ಮೇಲೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| ಸರ್ಕಾರಿ ಆದೇಶ ಸಂಖ್ಯೆ ಮತ್ತು ದಿನಾಂಕ | ಯೋಜನಾ ಸ್ಥಳ | ಅಧ್ಯರ್ಪಿಸಲು ಉದ್ದೇಶಿಸಿರುವ ಸಾಮರ್ಥ್ಯ (ಮೆಗಾ ವ್ಯಾಟ್‌ಗಳಲ್ಲಿ) |
|---|---|---|
| ಇನ್ 210 ಎನ್‌ಸಿಇ 2005 ದಿನಾಂಕ: 20–08–2005 | ಗುಲ್ಬರ್ಗಾ ಜಿಲ್ಲೆಯ ಸುಗುರು, ಸುಗುರುತಾಂಡ, ಕಾಂಚನಹಾಳ, ಕಲ್ಲಗಿತಾಂಡ ಗ್ರಾಮಗಳಲ್ಲಿ | 6 ಮೆ.ವ್ಯಾ. |
| | ಗುಲ್ಬರ್ಗಾ ಜಿಲ್ಲೆಯ ಹೊಡ್ಮೈ ಬೀರನಹಳ್ಳಿ, ಗಂಜಿಗೀರ್, ರುಸ್ತಾಂಪುರ, ಹುವಿನಬಾವಿ | 12.75 ಮೆ. ವ್ಯಾ |

| | | |
|---|---|---|
| | ಗುಲ್ಬರ್ಗಾ ಜಿಲ್ಲೆಯ ಚಿಮ್ಮನಕೋಡು, ನರನಾಳ, ಮಾರಪಲ್ಲಿ | 12 ಮೆ.ವ್ಯಾ |
| | ಬೀದರ್ ಜಿಲ್ಲೆಯ ಮುತ್ತಂಗಿ | 4.50 ಮೆ.ವ್ಯಾ |
| | ಗುಲ್ಬರ್ಗಾ ಜಿಲ್ಲೆಯ ಕುಸರಾಂಪಲ್ಲಿ ಮತ್ತು ತುಮಕುಂಟ | 3 ಮೆ. ವ್ಯಾ |
| ಇನ್ 210 ಎನ್‌ಸಿಇ 2005 ದಿನಾಂಕ: 20–08–2005 | ಬಾಗಲಕೋಟೆ ಜಿಲ್ಲೆಯ ಬಾದಾಮಿ ಮತ್ತು ಅದಗಾಳ | 12 ಮೆ.ವ್ಯಾ |
| | ಬೀದರ್ ಜಿಲ್ಲೆಯ ಈಶ್ವರನಾಯಕತಾಂಡ, ಜಾನಹಿಕೇರಿ, ಎಕಲಾರ, ಮುನ್ನಹನಾಳ ಮತ್ತು ಸಂತಪುರ | 10.50 ಮೆ.ವ್ಯಾ. |
| | ಒಟ್ಟು | 60.75 ಮೆ.ವ್ಯಾ |
| ಇಂಇ 124 ಎನ್‌ಸಿಇ 2002 ದಿನಾಂಕ:31–05–2002 | ಚಿತ್ರದುರ್ಗ ಜಿಲ್ಲೆಯ ಜೋಗಿಮಟ್ಟಿ | 10 ಮೆ.ವ್ಯಾ |
| | ಚಿತ್ರದುರ್ಗ ಜಿಲ್ಲೆಯ 3/4 ವೆಸ್ಟ್ ಆಫ್ ಜೋಗಿಮಟ್ಟಿ | 12 ಮೆ.ವ್ಯಾ |
| | ಒಟ್ಟು | 22 ಮೆ.ವ್ಯಾ |
| ಡಿಇ 124 ಎಸ್‌ಸಿಇ 2002 ದಿನಾಂಕ: 05–03–2003 | ಗದಗ ಜಿಲ್ಲೆಯ ಕಪ್ಪದಗುಡ್ಡ ಏರಿಯಾ 1 | 4 ಮೆ.ವ್ಯಾ |
| | ಗದಗ ಜಿಲ್ಲೆಯ ಕಪ್ಪದಗುಡ್ಡ ಏರಿಯಾ 2 | 3 ಮೆ. ವ್ಯಾ |
| | ಗದಗ ಜಿಲ್ಲೆಯ ಕಪ್ಪದಗುಡ್ಡ ಏರಿಯಾ 4 | 3 ಮೆ. ವ್ಯಾ |
| | ಗದಗ ಜಿಲ್ಲೆಯ ಕಪ್ಪದಗುಡ್ಡ ಏರಿಯಾ 5 | 8 ಮೆ.ವ್ಯಾ |
| | ಗದಗ ಜಿಲ್ಲೆಯ ಕಪ್ಪದಗುಡ್ಡ ಏರಿಯಾ 6 | 2 ಮೆ. ವ್ಯಾ |
| | ಒಟ್ಟು | 20 ಮೆ.ವ್ಯಾ |
| ಎಲ್ಲಾ ಸೇರಿ ಒಟ್ಟು | | 102.75 |

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 441 ಎನ್‌ಸಿಇ 2011, ಬೆಂಗಳೂರು, ದಿನಾಂಕ: 11–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮೆ. ವೆಸ್ಟಾಸ್ ವಿಂಡ್ ಟೆಕ್ನಾಲಜಿ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಮತ್ತು ಅದರ ಸಮೂಹ ಕಂಪನಿಗಳಿಗೆ ಹಂಚಿಕೆಯಾಗಿರುವ ಪವನ ವಿದ್ಯುತ್ ಯೋಜನೆ ಸಾಮರ್ಥ್ಯದಲ್ಲಿ ಈ ಕೆಳಕಂಡಂತೆ 102.75 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆಯನ್ನು ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

| ಸರ್ಕಾರಿ ಆದೇಶ ಸಂಖ್ಯೆ ಮತ್ತು ದಿನಾಂಕ | ಯೋಜನಾ ಸ್ಥಳ | ರದ್ದುಪಡಿಸಿರುವ ಸಾಮರ್ಥ್ಯ (ಮೆಗಾ ವ್ಯಾಟ್‌ಗಳಲ್ಲಿ |
|---|---|---|
| ಇಂಇ 124 ಎನ್‌ಸಿಇ 2002 ದಿನಾಂಕ: 31–05–2002 | ಚಿತ್ರದುರ್ಗ ಜಿಲ್ಲೆಯ ಜೋಗಿಮಟ್ಟಿ | 10 ಮೆ. ವ್ಯಾ |
| | ಚಿತ್ರದುರ್ಗ ಜಿಲ್ಲೆಯ 3/4 ವೆಸ್ಟ್ ಆಫ್ ಜೋಗಿಮಟ್ಟಿ | 12 ಮೆ. ವ್ಯಾ |
| | **ಒಟ್ಟು** | **22 ಮೆ. ವ್ಯಾ.** |
| ಡಿಇ 124 ಎನ್‌ಸಿಇ 2002 ದಿನಾಂಕ: 05–03–2003 | ಗದಗ ಜಿಲ್ಲೆಯ ಕಪ್ಪದಗುಡ್ಡ ಏರಿಯಾ 1 | 4 ಮೆ. ವ್ಯಾ. |
| | ಗದಗ ಜಿಲ್ಲೆಯ ಕಪ್ಪದಗುಡ್ಡ ಏರಿಯಾ 2 | 3 ಮೆ. ವ್ಯಾ. |
| | ಗದಗ ಜಿಲ್ಲೆಯ ಕಪ್ಪದಗುಡ್ಡ ಏರಿಯಾ 4 | 3 ಮೆ. ವ್ಯಾ |
| | ಗದಗ ಜಿಲ್ಲೆಯ ಕಪ್ಪದಗುಡ್ಡ ಏರಿಯಾ 5 | 8 ಮೆ. ವ್ಯಾ. |
| | ಗದಗ ಜಿಲ್ಲೆಯ ಕಪ್ಪದಗುಡ್ಡ ಏರಿಯಾ 6 | 2 ಮೆ. ವ್ಯಾ. |
| | **ಒಟ್ಟು** | **20 ಮೆ.ವ್ಯಾ.** |
| ಇನ್ 210 ಎನ್‌ಸಿಇ 2005 ದಿನಾಂಕ: 20–08–2005 | ಗುಲ್ಬರ್ಗಾ ಜಿಲ್ಲೆಯ ಸುಗುರು, ಸುಗುರುತಾಂಡ, ಕಾಂಚನಹಾಳ, ಕಲ್ಲಗಿತಾಂಡ ಗ್ರಾಮಗಳಲ್ಲಿ | 6 ಮೆ. ವ್ಯಾ. |
| | ಗುಲ್ಬರ್ಗಾ ಜಿಲ್ಲೆಯ ಹೊಡ್ಮೈ ಬೀರನಹಳ್ಳಿ, ಗಂಜಿಗೀರ್, ರುಸ್ತಾಂಪುರ, ಹುವಿನಬಾವಿ | 12.75 ಮೆ. ವ್ಯಾ |
| | ಗುಲ್ಬರ್ಗಾ ಜಿಲ್ಲೆಯ ಚಿಮ್ಮನಕೋಡು, ನರನಾಳ, ಮಾರಪಲ್ಲಿ | 12 ಮೆ.ವ್ಯಾ |
| | ಬೀದರ್ ಜಿಲ್ಲೆಯ ಮುತ್ತಂಗಿ | 4.50 ಮೆ.ವ್ಯಾ |
| | ಗುಲ್ಬರ್ಗಾ ಜಿಲ್ಲೆಯ ಕುಸರಾಂಪಲ್ಲಿ ಮತ್ತು ತುಮಕುಂಟ | 3 ಮೆ. ವ್ಯಾ |
| | ಬಾಗಲಕೋಟೆ ಜಿಲ್ಲೆಯ ಬಾದಾಮಿ ಮತ್ತು ಅದಗಾಳ | 12 ಮೆ.ವ್ಯಾ |
| | ಬೀದರ್ ಜಿಲ್ಲೆಯ ಈಶ್ವರನಾಯಕತಾಂಡ, ಜಾನಹಿಕೇರಿ, ಎಕಲಾರ, ಮುನ್ನಹನಾಳ ಮತ್ತು ಸಂತಪುರ | 10.50 ಮೆ.ವ್ಯಾ. |
| | **ಒಟ್ಟು** | **60.75 ಮೆ.ವ್ಯಾ** |
| | **ಎಲ್ಲಾ ಸೇರಿ ಒಟ್ಟು** | **102.75** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್. ಬಿ.ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

ಪಿ.ಆರ್. 331

## ಇಂಧನ ಸಚಿವಾಲಯ

**ವಿಷಯ :** ಮೆ. ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗಿರುವ 30.60 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 2.55 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಗೋಲ್ಡನ್ ಹ್ಯಾಚರೀಸ್ ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಇನ್ 337 ಎನ್‌ಸಿಇ 2006, ದಿನಾಂಕ: 16–10–2006.
2) ಸರ್ಕಾರದ ಆದೇಶ ಸಂಖ್ಯೆ: ಇನ್ 09 ಎನ್‌ಸಿಇ 2007 ದಿನಾಂಕ: 12–1–2007.
3) ಸರ್ಕಾರದ ಆದೇಶ ಸಂಖ್ಯೆ: ಇನ್ 432 ಎನ್‌ಸಿಇ 2010 ದಿನಾಂಕ: 16–12–2010.
4) ಸರ್ಕಾರದ ಆದೇಶ ಸಂಖ್ಯೆ: ಇಎನ್ 318 ಎನ್‌ಸಿಇ 2011, ದಿನಾಂಕ: 26–07–2011.
5) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/GH-2.55 (GNS-02,03 & 34)/RSR/2011/4499, ದಿನಾಂಕ: 30–11–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ ಮೆ: ಆರ್ ಶ್ರೀ ರಾಮುಲು ರೆಡ್ಡಿ ಮತ್ತು ಕೋ ಕಂಪನಿಗೆ ದಾವಣಗೆರೆ, ಬಳ್ಳಾರಿ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ 63 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರಿ ಆದೇಶದಲ್ಲಿ ಮೆ: ಆರ್. ಶ್ರೀ ರಾಮುಲು ರೆಡ್ಡಿ ಮತ್ತು ಕೋ ಹೆಸರನ್ನು ಮೆ: ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಅನುಮತಿಸಿರುವ ಒಟ್ಟು ಸಾಮರ್ಥ್ಯದಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ಅನುಮತಿಸಿರುವ ಅಂಶಿಕ ಸಾಮರ್ಥ್ಯವಾಗಿರುವ 7 ಮೆ.ವ್ಯಾ. ಸಾಮರ್ಥ್ಯವನ್ನು 30.60 ಮೆ.ವ್ಯಾ ಗೆ 25 ಮೆ.ವ್ಯಾ ವಿದ್ಯುತ್‌ನ್ನು ರಾಜ್ಯದ ಗ್ರಿಡ್‌ಗೆ ಸರಬರಾಜು ಮಾಡತಕ್ಕದ್ದು ಹಾಗೂ ಈ ಯೋಜನೆಯನ್ನು ದಿ: 31–03–2011ರೊಳಗೆ ಅನುಷ್ಠಾನಗೊಳಿಸತಕ್ಕದ್ದೆಂಬ ಷರತ್ತಿಗೊಳಪಟ್ಟು ಹೆಚ್ಚಿಸಲು ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಅನುಮೋದನೆ ನೀಡಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಈ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ: 31–12–2011 ರವರಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು: ಮೆ: ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಬೆಳಗಾವಿ ಜಿಲ್ಲೆಯಲ್ಲಿ ಅನುಷ್ಠಾನ ಮಾಡಲು ಅನುಮತಿಸಿರುವ 30.60 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 2.55 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಗೋಲ್ಡನ್ ಹ್ಯಾಚರೀಸ್ ಕಂಪನಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಯೋಜನೆಯು ಖಾಸಗಿ ಜಮೀನಿನಲ್ಲಿ ಬರುತ್ತದೆ ಮತ್ತು ಈ ಯೋಜನೆಯನ್ನು ದಿನಾಂಕ: 31–12–2011ಕ್ಕೆ ಅನುಷ್ಠಾನಗೊಳಿಸಲಾಗುವುದೆಂದು ಸಹ ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 450 ಎನ್‌ಸಿಇ 2011, ಬೆಂಗಳೂರು, ದಿನಾಂಕ: 11–01–2012**

ಮೆ: ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಬೆಳಗಾವಿ ಜಿಲ್ಲೆಯಲ್ಲಿ ಅನುಷ್ಠಾನ ಮಾಡಲು ಅನುಮತಿಸಿರುವ 30.60 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 2.55 ಮೆ.ವ್ಯಾ ಸಾಮರ್ಥ್ಯದ ಯೋಜನೆಯನ್ನು ಮೆ: ಗೋಲ್ಡನ್ ಹ್ಯಾಚರೀಸ್ ಕಂಪನಿಯವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲಾಗಿದೆ:–

**Schedule**

| Location and District | Description |
|---|---|
| Shirgaon village, Chikkodi Taluk Belgaum District | The identified potential comprises of two areas and mixture of hill and plains. Area A is spread N-E direction of Shirgaon. Whereas Area B is located in South of Girgaon and is spread in E-W directions. The Geographical co-ordinates of Area A & Area-B are as follows:-<br>Area –A:<br>Latitude : $16^0$27'32"- $16^0$30'0" N<br>Longitude : $74^0$31'06" – $74^0$32'57" E<br>Ridge peaks: 620 & 647m AMSL<br>Area – B<br>Latitude : $16^0$25'52"- $16^0$26'41" N<br>Longitude : $74^0$30'52" – $74^0$32'41" E<br>Ridge peaks: 720m AMSL<br>Toposheet: 47 L/11 |

Land details of the Project

| Village Name | Taluk & District | MW | Land Sy. No | No. of WTGs | Extent in land (Acres) | WTG Location No. |
|---|---|---|---|---|---|---|
| Shirgaon | Chikkodi/ | 0.85 | 194& 158 | 1 No. | 2 Acres | GNS 02 |
| | Belgaum | 0.85 | 140/4 | 1 No. | 2 Acres | GNS 03 |
| | | 0.85 | 157 | 1 No. | 2 Acres | GNS 34 |

1. ಮೆ: ಗೋಲ್ಡನ್ ಹ್ಯಾಚರೀಸ್ ರವರು ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ: 06–01–2012ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. ಸದರಿ ಯೋಜನೆಯನ್ನು ದಿನಾಂಕ 31–1–2011ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (committed letter)
3. ಮೆ: ಗೋಲ್ಡನ್ ಹ್ಯಾಚರೀಸ್ ರವರು ವಿದ್ಯುತ್ ಖರೀದಿ ಒಪ್ಪಂದವನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ ಇವರೊಂದಿಗೆ ಮಾಡಿಕೊಳ್ಳತಕ್ಕದ್ದು.
4. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತದ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್. ಬಿ.ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 332 ಇಂಧನ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸಹಾಯಕ ಸರ್ಕಾರಿ ಅಭಿಯೋಜಕರು –ವ–ಸಹಾಯಕ ಸರ್ಕಾರಿ ವಕೀಲರುಗಳ ಹುದ್ದೆಗಳನ್ನು ಭರ್ತಿ ಮಾಡಲು ಆಯ್ಕೆ ಸಮಿತಿಯನ್ನು ಪುನರ್ ರಚಿಸುವ ಕುರಿತು.

**ಉಲ್ಲೇಖ :** 1) ಸರ್ಕಾರದ ಆದೇಶ ಸಂಖ್ಯೆ: ಒಇ 520 ಪಿಪಿಇ 2008, ದಿನಾಂಕ: 12–01–2009.
**2)** ತಿದ್ದುಪಡಿ ಸಂಖ್ಯೆ: ಒಇ 520 ಪಿಪಿಇ 2008, ದಿನಾಂಕ: 11–02–2009.
**3)** ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್/ಸಿಶಾ–1ಎ /71/2011–12 ದಿನಾಂಕ: 30–12–2011.

**ಪ್ರಸ್ತಾವನೆ :**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಖಾಲಿ ಇರುವ ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರುಗಳ ಹುದ್ದೆಗಳನ್ನು ಭರ್ತಿ ಮಾಡಲು ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ 12–01–2009ರ ಆದೇಶ ಮತ್ತು ಮೇಲೆ ಓದಲಾದ (2)ರಲ್ಲಿ ತಿದ್ದುಪಡಿಯಲ್ಲಿ ಈ ಕೆಳಕಂಡಂತೆ ಆಯ್ಕೆ ಸಮಿತಿಯನ್ನು ರಚಿಸಲಾಗಿತ್ತು.

| | | | |
|---|---|---|---|
| 1. | ಸಕಾರದ ಅಪರ ಮುಖ್ಯ ಕಾರ್ಯದರ್ಶಿ, ಒಳಾಡಳಿತ ಇಲಾಖೆ, ವಿಧಾನ ಸೌಧ, ಬೆಂಗಳೂರು | : | ಅಧ್ಯಕ್ಷರು |
| 2. | ಸರ್ಕಾರದ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಸೆರೆಮನೆ, ಅಪರಾಧಗಳು ಮತ್ತು ಸಹಾಯಕ ಸೇವೆಗಳು) ವಿಧಾನ ಸೌಧ, ಬೆಂಗಳೂರು | : | ಸದಸ್ಯರು |
| 3. | ಸರ್ಕಾರದ ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ವಿಧಾನ ಸೌಧ, ಬೆಂಗಳೂರು | : | ಸದಸ್ಯರು |
| 4. | ಸರ್ಕಾರದ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ ವಿಕಾಸ ಸೌಧ, ಬೆಂಗಳೂರು | : | ಸದಸ್ಯರು |
| 5. | ರಿಜಿಸ್ಟ್ರಾರ್, ಜುಡಿಷಿಯಲ್, ಕರ್ನಾಟಕ ಉಚ್ಚ, ನ್ಯಾಯಾಲಯ, ಬೆಂಗಳೂರು | : | ಸದಸ್ಯರು |
| 6. | ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಕಾವೇರಿ ಭವನ, ಬೆಂಗಳೂರು | : | ಸದಸ್ಯರು |
| 7. | ಶ್ರೀ ಎಸ್.ಪಿ. ಅಣ್ಣೇಗೌಡ ಜಂಟಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು | : | ಕಾರ್ಯದರ್ಶಿಗಳು |

ಮೇಲೆ ಓದಲಾದ (3)ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಇವರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರುಗಳ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಆಯ್ಕೆ ಸಮಿತಿಯನ್ನು ಪುನರ್ ರಚಿಸುವಂತೆ ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 486 ಪಿಪಿಇ 2011, ಬೆಂಗಳೂರು, ದಿನಾಂಕ: 10–01–2012**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಖಾಲಿ ಇರುವ ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರುಗಳ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಆಯ್ಕೆ ಸಮಿತಿಯನ್ನು ಈ ಕೆಳಕಂಡಂತೆ ಪುನರ್ ರಚಿಸಲಾಗಿದೆ.

| | | |
|---|---|---|
| 1. ಸಕಾರದ ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, ವಿಧಾನ ಸೌಧ, ಬೆಂಗಳೂರು | : | ಅಧ್ಯಕ್ಷರು |
| 2. ಸರ್ಕಾರದ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಸೆರೆಮನೆ, ಅಪರಾಧಗಳು ಮತ್ತು ಸಹಾಯಕ ಸೇವೆಗಳು) ವಿಧಾನ ಸೌಧ, ಬೆಂಗಳೂರು | : | ಸದಸ್ಯರು |
| 3. ಸರ್ಕಾರದ ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ವಿಧಾನ ಸೌಧ, ಬೆಂಗಳೂರು | : | ಸದಸ್ಯರು |
| 4. ಸರ್ಕಾರದ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ ವಿಕಾಸ ಸೌಧ, ಬೆಂಗಳೂರು | : | ಸದಸ್ಯರು |
| 5. ರಿಜಿಸ್ಟ್ರಾರ, ಜುಡಿಷಿಯಲ್, ಕರ್ನಾಟಕ ಉಚ್ಚ, ನ್ಯಾಯಾಲಯ, ಬೆಂಗಳೂರು | : | ಸದಸ್ಯರು |
| 6. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಕಾವೇರಿ ಭವನ, ಬೆಂಗಳೂರು | : | ಕಾರ್ಯದರ್ಶಿ |

ಸಭೆಯಲ್ಲಿ ಹಾಜರಿರಬೇಕಾದ ಸದಸ್ಯರ ಗಣಪೂರ್ತಿ (ಕೋರಂ) ಸಂಖ್ಯೆ: 3 (ಮೂರು) ಆಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು-ಬಿ)

ಪಿ.ಆರ್. 333

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಶೇಖರ್ ಭೋವಿ, ಹಿಂದೆ ವಿಶೇಷ ಸರ್ಕಾರಿ ಅಭಿಯೋಜಕರು, ತ್ವರಿತ ವಿಲೇವಾರಿ ನ್ಯಾಯಾಲಯ, ಉಡುಪಿ ರವರ ವಿರುದ್ಧ ದಾಖಲಾದ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಉಲ್ಲೇಖ :** 1) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ-2/ಸಿಆರ್ 1/2011 ಉಡುಪಿ. ದಿನಾಂಕ: 18-10-2011.

**2)** ತನಿಖಾಧಿಕಾರಿಯ ವರದಿ ಸಂ.ಪೊವಿ/ಕೆಎಲ್ಎ/ಇಐ/ಉಡುಪಿ/ಸಿಆರ್-1/2011, ದಿನಾಂಕ: 12-10-2011.

**3)** ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಯೋಗಿಕ ಪಂಚನಾಮೆ, ಸ್ವತ್ತುಗಳ ಪಟ್ಟಿ ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಅಪರ ಪೋಲಿಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರ ದಿನಾಂಕ: 18-10-2010 ಪತ್ರದೊಡನೆ ಮೇಲೆ (2) ಮತ್ತು (3)ರಲ್ಲಿ ಓದಲಾದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಕಳುಹಿಸುತ್ತಾ, ಶ್ರೀ ಶೇಖರ್ ಭೋವಿ, ಈ ಹಿಂದೆ ವಿಶೇಷ ಸರ್ಕಾರಿ ಅಭಿಯೋಜಕರು, ತ್ವರಿತ ವಿಲೇವಾರಿ ನ್ಯಾಯಾಲಯ, ಉಡುಪಿ ಇವರ ವಿರುದ್ಧ ಉಡುಪಿಯ ಲೋಕಾಯುಕ್ತ ಠಾಣೆಯಲ್ಲಿ ದಾಖಲಿಸಿರುವ ಮೊಕದ್ದಮೆ ನಂ. 01/2011ರ ಪ್ರಕರಣದ ಸಂಬಂಧ ಅಪಾಧಿತನನ್ನು ಘನ ನ್ಯಾಯಾಲಯುದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ-1988ರ 19(1)(ಬಿ) ಕಲಂನ ಅಡಿಯಲ್ಲಿ ಸರ್ಕಾರದ ಮಂಜೂರಾತಿ ಕೋರಿರುತ್ತಾರೆ.

ಸರ್ಕಾರವು, ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರ ಮೇಲೆ (1)ರಲ್ಲಿ ಓದಲಾದ ಪತ್ರ ಸಂಖ್ಯೆ ಲೋಕ್/ಐಎನ್‌ವಿ(ಜಿ)/ಎಂ-2/ಸಿಆರ್-1/2011 ಉಡುಪಿ, ದಿನಾಂಕ: 18-10-2011 ರೊಡನೆ ಕಳುಹಿಸಿಕೊಟ್ಟ ಮೇಲೆ (2)ರಲ್ಲಿ ಓದಲಾದ ಅಂತಿಮ ವರದಿಯ ಜೊತೆಗಿದ್ದ ಮೇಲೆ (3)ರಲ್ಲಿ ಓದಲಾದ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1. ಶ್ರೀ. ಬಿ. ನಾಗೇಶ್ ನಾಯಕ್ ಬೈರಂಪಳ್ಳಿ ಗ್ರಾಮ, ಹರಿಕಂಡಿಕೆ, ಉಡುಪಿ ತಾಲ್ಲೂಕ್, ಉಡುಪಿ ಜಿಲ್ಲೆರವರ ದಿನಾಂಕ: 10-01-011 ರ ಫಿರ್ಯಾದು.
2. ಉಡುಪಿಯ ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ ನಂ 01/2011ರ ಪ್ರಥಮ ವರ್ತಮಾನ ವರದಿ.
3. ದಿನಾಂಕ: 10-01-2011 ರ ಪ್ರಾಯೋಗಿಕ ಪಂಚನಾಮೆ.
4. ದಿನಾಂಕ: 10-01-2011ರ ಟ್ರ್ಯಾಪ್ ಮಹಜರ್
5. ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: MRL/LOK/35/10-11, ದಿನಾಂಕ: 26-02-2011.
6. ಕೃತ್ಯ ನಡೆದ ಸ್ಥಳದ ನಕಾಶೆ,

7. ಫಿರ್ಯಾದಿ ಮತ್ತು ಸಾಕ್ಷಿಗಳಾದ ಈ ಕೆಳಕಂಡವರ ಹೇಳಿಕೆಗಳು
1. ಶ್ರೀ ಬಿ. ನಾಗೇಶ್ ನಾಯಕ್.
2. ಶ್ರೀ ಗಿರೀಶ್ ಡಿ. ಗೌರವ್‌ಗೋಳ
3. ಶ್ರೀ ಬಿ. ದೇವರಾಜಪ್ಪ.
8. ಲಂಚ ಕೇಳಲು ಆಧಾರವಾದ ಕಡತ/ದಾಖಲೆ: ಉಡುಪಿ ಹಿರಿಯಡ್ಕ ಠಾಣೆಯ ವ್ಯಾಪ್ತಿಯಲ್ಲಿ ಶ್ರೀ ಬಿ. ನಾಗೇಶ್ ನಾಯಕ್ ಇವರ ಮೇಲೆ ಬೈರಂಪಳ್ಳಿಯ ಶ್ರೀ ಪದ್ಮರಾಜ್ ರಾವ್ ಮತ್ತಿತರ ಒಟ್ಟು 6 ಜನರು ದಿನಾಂಕ: 20-03-2009 ರಂದು ಹಲ್ಲೆ ನಡೆಸಿದ್ದಕ್ಕೆ ಸಂಬಂಧಿಸಿದ ಉಡುಪಿಯ 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು ಮತ್ತು ಪ.ದ.ನ್ಯಾ.ದಂ.ದ ಸಿ.ಸಿ.ನಂ 3311/2009ರ ಆದೇಶದ ವಿರುದ್ಧದ ಉಡುಪಿಯ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯದ Crl A No. 64/2010
9. ಅಪಾಧಿತರಾದ ಶ್ರೀ ಶೇಖರ್ ಭೋವಿ, ಈ ಹಿಂದೆ ವಿಶೇಷ ಸರ್ಕಾರಿ ಅಭಿಯೋಜಕರು, ತ್ವರಿತ ವಿಲೇವಾರಿ ನ್ಯಾಯಾಲಯ, ಉಡುಪಿ ರವರ ಸಮಜಾಯಿಸಿ, ಹೇಳಿಕೆಗಳು.

ತನಿಖಾಧಿಕಾರಿಗಳಾದ ಶ್ರೀ ಬಿ.ಪಿ. ದಿನೇಶ್ ಕುಮಾರ್, ಪೋಲೀಸ್ ಇನ್ಸ್‌ಪೆಕ್ಟರ್, ಪೋಲೀಸ್ ವಿಭಾಗ ಕರ್ನಾಟಕ ಲೋಕಾಯುಕ್ತ ಉಡುಪಿ, ಶ್ರೀ ಶೇಖರ್ ಭೋವಿ, ಈ ಹಿಂದೆ ವಿಶೇಷ ಸರ್ಕಾರಿ ಅಭಿಯೋಜಕರು, ತ್ವರಿತ ವಿಲೇವಾರಿ ನ್ಯಾಯಾಲಯ, ಉಡುಪಿ ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಉಡುಪಿಯ ಪೊಲೀಸ್ ಠಾಣೆ ಯಲ್ಲಿ ಗುನ್ನೆ ಸಂಖ್ಯೆ: 01/2011ರ ಲಂಚ ನಿರೋಧಕ ಕಾಯ್ದೆ 1988ರ ಕಲಮ 7 13(1)ಡಿ) ಜೊತೆಯಲ್ಲಿ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಶ್ರೀ ಶೇಖರ್ ಭೋವಿ, ಈ ಹಿಂದೆ ವಿಶೇಷ ಸರ್ಕಾರಿ ಅಭಿಯೋಜಕರು, ಇವರು ಫಿರ್ಯಾದಿ ಶ್ರೀ ಬಿ. ನಾಗೇಶ್ ನಾಯಕ್, ವಯಸ್ಸು 47 ವರ್ಷ, ತಂದೆ: ಬಿ. ಕೃಷ್ಣಾ ನಾಯಕ್, ಬೈರಂಪಳ್ಳಿ, ಗ್ರಾಮ, ಹರಿಕಂಡಿಕೆ, ಉಡುಪಿ, ತಾಲ್ಲೂಕ್, ಉಡುಪಿ ಜಿಲ್ಲೆ ಇವರಿಂದ ಉಡುಪಿಯ 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು ಮತ್ತು ಪ್ರ.ದ.ನ್ಯಾ. ದಂ.ದ ಸಿ.ಸಿ.ನಂ 3311/2009 ರ ಆದೇಶದನ್ವಯ ಆರೋಪಿಗಳಿಗೆ ನಿಡಲಾದ ಶಿಕ್ಷೆಯನ್ನು ಉಡುಪಿಯ ಜಿಲ್ಲಾ ಮತ್ತು ಸತ್ರ ನ್ಯಾಯಾಧಿಶರ ನ್ಯಾಯಾಲಯದ Crl A No. 64/2010 ಪ್ರಕರಣದಲ್ಲಿ ಖಾಯಂಗೊಳಿಸುವ ಸರ್ಕಾರಿ ಕೆಲಸವನ್ನು ಮಾಡಲು ರೂ. 10000-00 ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸಾರ್ವಜನಿಕ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ: 10-01-2011 ರಂದು ನ್ಯಾಯಾಲಯದ ಹಳೆ ಕಟ್ಟಡದ ಮೊದಲನೆಯ ಮಹಡಿಯ ತ್ವರಿತ ವಿಲೇವಾರಿ ನ್ಯಾಯಾಲಯದ ವಿಶೇಷ ಸರ್ಕಾರಿ ಅಭಿಯೋಜಕರ, ಕಛೇರಿಯಲ್ಲಿ ಬಿಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಶೇಖರ್ ಭೋವಿ, ಈ ಹಿಂದೆ ವಿಶೇಷ ಸರ್ಕಾರಿ ಅಭಿಯೋಜಕರು, ಅಕ್ರಮ ಸಂಭಾವನೆಯಾದ ರೂ. 5000-00 ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆದ ವೇಳೆಯಲ್ಲಿ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಸಾರ್ವಜನಿಕ ಅಧಿಕಾರಿಯ ಬಲಗೈ ಹಸ್ತ ಮತ್ತು ಬೆರಳುಗಳನ್ನು ಸೋಡಿಯಂ ಕಾರ್ಬೊನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಪಿಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಯನಿಕ ತಜ್ಞರ ಪರೀಕ್ಷಣಾ ವರದಿಯಲ್ಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಪಿರ್ಯಾದಿ ಹಾಗೂ ಆಪಾಧಿತ ಸಾರ್ವಜನಿಕ ಅಧಿಕಾರಿಯ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 5000-00ಗಳನ್ನು ಶ್ರೀ ಶೇಖರ್ ಭೋವಿ, ವಿಶೇಷ ಸರ್ಕಾರಿ ಅಭಿಯೋಜಕರು ಇವರಿಂದ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ -1988ರ ಕಲಂ 7,13(1)ಡಿರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ-1988ರ ಅನ್ವಯ ಕಲಂ 7,13(1)(ಡಿ) ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರವು ಮನಗಂಡಿದೆ. ಸರ್ಕಾರವು ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 5(5) ಮೇರೆಗೆ ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾಗಿದ್ದು ಸರ್ಕಾರ ಆದೇಶ ಸಂ. ಲಾ 31 ಎಲ್‌ಸಿಇ 2011, ದಿನಾಂಕ: 26-05-2011 ರನ್ವಯ ದಿನಾಂಕ: 10-01-2011 ರಿಂದಲೇ ಜಾರಿಗೆ ಬರುವಂತೆ ಸದರಿ ತಾತ್ಕಾಲಿಕ ಹುದ್ದೆಯಿಂದ ವಿಮುಕ್ತಿಗೊಳಿಸಿದೆ. ಆದ್ದರಿಂದ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ)ರ ಅಡಿ ಆಪಾದಿತ ಸಾರ್ವಜನಿಕ ಅಧಿಕಾರಿಯಾಗಿದ್ದ ಶ್ರೀ ಶೇಖರ್ ಭೋವಿರವರನ್ನು ಕಲಂ 7 ಮತ್ತು 13(ಡಿ) ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 553 ಪಿಪಿಇ 2011, ಬೆಂಗಳೂರು, ದಿನಾಂಕ: 09-01-2012**

ಆರೋಪಿತರಾದ ಶ್ರೀ ಶೇಖರ್ ಭೋವಿ, ಈ ಹಿಂದೆ ವಿಶೇಷ ಸರ್ಕಾರಿ ಅಭಿಯೋಜಕರು, ತ್ವರಿತ ವಿಲೇವಾರಿ ನ್ಯಾಯಾಲಯ, ಉಡುಪಿ ಇವರ ವಿರುದ್ಧ ಉಡುಪಿಯ ಲೋಕಾಯುಕ್ತ ಠಾಣೆಯಲ್ಲಿ ದಾಖಲಿಸಿರುವ ಮೊಕದ್ದಮೆ ನಂ. 01/2011ರ ಪ್ರಕರಣದಲ್ಲಿ ಲಂಚ ನಿರೋಧ ಕಾಯ್ದೆ -1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1)(ಬಿ) ರನ್ವಯ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಮಾನ್ಯ ಲೋಕಾಯುಕ್ತರಿಗೆ ಈ ಮೂಲಕ ಅಭಿಯೋಜನಾ ಮಂಜೂರಾತಿಯನ್ನು ನೀಡಿದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿರ್ವಹಣೆ ನಿಯಮಾವಳಿ -1977ರ ನಿಯಮ 19(1)ರ ನ್ವಯ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ: 09-01-2012ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಕೆ. ನಿಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು-ಬಿ)

ಪಿ.ಆರ್. 334

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ತನ್ವೀರ್ ಅಹಮದ್, ಪಿ.ಐ., ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: ಡಿಇ(2)ಸಿಓಪಿ/229/2009 ದಿ: 26–11–2009
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)82/2009–10 ದಿನಾಂಕ: 22–9–2010
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 17–6–2011
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)82/2009–10 ದಿನಾಂಕ: 18–8–2011

**ಪ್ರಸ್ತಾವನೆ :**

ಶ್ರೀ ತನ್ವೀರ್ ಅಹಮದ್, ಪಿ.ಐ., ಇವರು ಬೆಂಗಳೂರಿನ ಜೆ.ಸಿ. ನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಉದಾಸೀನತೆ, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

> "ಶ್ರೀ ತನ್ವೀರ್ ಅಹಮದ್, ಪಿ.ಐ., ಆದ ನೀವು ಜೆ.ಸಿ. ನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅರ್ಜಿದಾರರಾದ ಶ್ರೀ ಮೊಹಮ್ಮದ್ ಮುಸ್ತಾಕ್ ಅಹಮದ್, ನಂ. 20/2, ನೆಲಮಹಡಿ, 1ನೇ ಕ್ರಾಸ್, ಮಾರಪ್ಪ ಗಾರ್ಡನ್, ಬೆಂಗಳೂರು ನಗರ ರವರ ಮನೆಯಲ್ಲಿ ದಿ: 11–12–2008 ರಂದು ಕಳ್ಳತನವಾಗಿರುವ ಬಗ್ಗೆ ಠಾಣೆಯಲ್ಲಿ ದೂರು ನೀಡಿದ್ದು, ಸದರಿ ದೂರನ್ನು ನೀವು ದಾಖಲಿಸಿಕೊಳ್ಳದೆ ಸದರಿ ದೂರಿನ ಬಗ್ಗೆ ಯಾವುದೇ ಕ್ರಮ ಕೈಗೊಳ್ಳದೇ ದೂರಿಗೆ ಯಾವುದೇ ಸ್ವೀಕೃತಿಯನ್ನು ನೀಡದೆ ಕೃತ್ಯ ನಡೆದ ಸ್ಥಳಕ್ಕೆ ಹೋಗಿ ಪರಿಶೀಲಿಸದೇ ಶ್ವಾನ ದಳದಿಂದ ಸ್ಥಳವನ್ನು ಪರಿಶೀಲಿಸದೇ ಸ್ಥಳದಲ್ಲಿ ಮಹಜರ್ ಕ್ರಮ ಜರುಗಿಸದೇ, ನೀವು ಅರ್ಜಿದಾರರಿಗೆ ಈ ಪ್ರಕರಣದ ಬಗ್ಗೆ ಮಾಹಿತಿ ಇದೆ ಆರೋಪಿಗಳನ್ನು ಪತ್ತೆ ಹಚ್ಚಿ ನಿಮ್ಮ ಒಡವೆಗಳನ್ನು ಶೀಘ್ರವಾಗಿ ಪತ್ತೆ ಹಚ್ಚಿ ಕೊಡುತ್ತೇನೆಂದು ಅರ್ಜಿದಾರರಿಗೆ ಕೇವಲ ಆಶ್ವಾಸನೆಯನ್ನು ಮಾತ್ರ ನೀಡಿ ಅರ್ಜಿದಾರರು ಈ ಬಗ್ಗೆ ಹಲವಾರು ಬಾರಿ ಠಾಣೆಗೆ ಬಂದು ನಿಮ್ಮನ್ನು ವಿಚಾರಿಸಿದರೂ ಸಹ ಅರ್ಜಿದಾರರ ದೂರಿನ ಬಗ್ಗೆ ಯಾವುದೇ ಕ್ರಮ ಕೈಗೊಳ್ಳದೇ ನಂತರದಲ್ಲಿ ಮೇಲಾಧಿಕಾರಿಗಳಿಂದ ಒತ್ತಡ ತಂದಾಗ ದಿನಾಂಕ: 07–02–2009 ರಂದು ವಿಳಂಬವಾಗಿ ದೂರು ದಾಖಲಿಸಿರುತ್ತೀರಿ. ಈ ರೀತಿ ಒಬ್ಬ ಜವಾಬ್ದಾರಿಯುತ ಅಧಿಕಾರಿಯಾದ ನೀವು ದೂರನ್ನು ದಾಖಲಿಸದೆ ನಿಮ್ಮ ಕರ್ತವ್ಯದಲ್ಲಿ ಉದಾಸೀನತೆ, ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಕರ್ತವ್ಯಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 26–11–2009ರ ಆದೇಶದಲ್ಲಿ ಅರ್ಜಿದಾರ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಎರಡು ವರ್ಷಗಳ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 22–9–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಉದಾಸೀನತೆ, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 68 ಪೊಸಿಅ 2011, ಬೆಂಗಳೂರು, ದಿನಾಂಕ: 07–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ತನ್ವೀರ್ ಅಹಮದ್, ಪಿ.ಐ. ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 335

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಒಳಾಡಳಿತ ಸಚಿವಾಲಯ**

**ವಿಷಯ :** ದತ್ತ ಮಾಲಾ ಅಭಿಯಾನ ಕಾರ್ಯಕ್ರಮ ಸಂಬಂಧ ವಿಶೇಷ ಕಾರ್ಯನಿರ್ವಾಹಕ ದಂಡಾಧಿಕಾರಿಗಳನ್ನು ನೇಮಿಸಿರುವುದಕ್ಕೆ ಘಟನೋತ್ತರ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ಇವರ ಪತ್ರ ಸಂಖ್ಯೆ: ಜೆ1/ಎಂಎಎಜಿ/80/2011-12 ದಿನಾಂಕ: 4.11.2011.

2) ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ಇವರ ಅಧಿಕೃತ ಜ್ಞಾಪನ ಸಂಖ್ಯೆ: ಜೆ1/ದತ್ತಮಾಲಾ/80/2011-12 ದಿನಾಂಕ: 4.11.2011.

**ಪ್ರಸ್ತಾವನೆ :**

ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ಇವರು ದತ್ತ ಮಾಲಾ ಅಭಿಯಾನ ಕಾರ್ಯಕ್ರಮ ಸಂಬಂಧ ದಿನಾಂಕ 9.11.2011 ರಿಂದ 13.11.2011 ರವರೆಗೆ ಕಾನೂನು ಮತ್ತು ಸುವ್ಯವಸ್ಥೆ ಕಾಪಾಡುವ ದೃಷ್ಟಿಯಿಂದ ಸರ್ಕಾರದ ಅನುಮೋದನೆಯನ್ನು ಕಾಯ್ದಿರಿಸಿ 24 ಅಧಿಕಾರಿಗಳನ್ನು ಸಿಆರ್‌ಪಿಸಿ ಕಲಂ 21 ರನ್ವಯ ವಿಶೇಷ ಕಾರ್ಯನಿರ್ವಾಹಕ ದಂಡಾಧಿಕಾರಿಗಳನ್ನಾಗಿ ನೇಮಿಸಿ ಮೇಲೆ ಓದಲಾದ ಕ್ರಮಸಂಖ್ಯೆ (2) ದಿನಾಂಕ 4.11.2011 ರ ಪತ್ರದಲ್ಲಿ ಸರ್ಕಾರದ ಘಟನೋತ್ತರ ಅನುಮೋದನೆ ಕೋರಿರುತ್ತಾರೆ.

ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ಇವರು ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವ ದೃಷ್ಟಿಯಿಂದ ಕೈಗೊಂಡಿರುವ ಕ್ರಮವನ್ನು ಅನುಮೋದಿಸಿ ಘಟನೋತ್ತರ ಅನುಮೋದನೆ ನೀಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 516 ಎಸ್‌ಎಸ್‌ಟಿ 2011, ಬೆಂಗಳೂರು, ದಿನಾಂಕ: 07-01-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ಇವರು ಅಧಿಕೃತ ಜ್ಞಾಪನ ಸಂಖ್ಯೆ: ಜೆ1/ದತ್ತಮಾಲಾ/80/2011-12, ದಿನಾಂಕ 4.11.2011 ರಲ್ಲಿ ವಿಶೇಷ ಕಾರ್ಯನಿರ್ವಾಹಕ ದಂಡಾಧಿಕಾರಿಗಳನ್ನು ನೇಮಿಸಿರುವುದಕ್ಕೆ ಸರ್ಕಾರದ ಘಟನೋತ್ತರ ಅನುಮೋದನೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಈ. ಪಾಪಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ)

ಪಿ.ಆರ್. 337

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಮಲ್ಲೇಗೌಡ, ನಿವೃತ್ತ ಎ.ಎಸ್.ಐ., ಹೈಗ್ರೌಂಡ್ಸ್ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಕಮೀಷನರ್, ಕೇಂದ್ರ ವಿಭಾಗ, ಬೆಂಗಳೂರು, ಇವರ ಆದೇಶ ಸಂಖ್ಯೆ: ಡಿಇ/11/ಆರ್.6/ಡಿಸಿಪಿ(ಕೇ)03 ದಿ: 15-11-2003

2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: 25/ಅಪೀಲು/08 ದಿನಾಂಕ: 03-7-08

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 06-01-10

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)5/2010-11 ದಿನಾಂಕ: 23-11-2011

**ಪ್ರಸ್ತಾವನೆ :**

ಶ್ರೀ ಮಲ್ಲೇಗೌಡ, ನಿವೃತ್ತ ಎ.ಎಸ್.ಐ., ಬೆಂಗಳೂರು, ಇವರು ಹೈಗ್ರೌಂಡ್ಸ್ ಪೊಲೀಸ್ ಠಾಣೆ, ಬೆಂಗಳೂರು, ಇಲ್ಲಿ ಎಚ್.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅಧಿಕಾರ ದುರುಪಯೋಗ ಮತ್ತು ಕರ್ತವ್ಯದಲ್ಲಿ ಅತೀವ ದುರ್ನಡತೆ ಎಸಗಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

> "ಶ್ರೀ ಮಲ್ಲೇಗೌಡ, ಹೆಚ್.ಸಿ.-1354, ಹೈಗ್ರೌಂಡ್ಸ್ ಠಾಣೆ ಆದ ನೀವು ಜುಲೈ 2001ರಲ್ಲಿ 50,000-00 ರೂ.ಗಳನ್ನು ಶ್ರೀ ತ್ಯಾಗರಾಜನಗರದ ಕೋ-ಆಪರೇಟಿವ್ ಬ್ಯಾಂಕ್ ಲಿಮಿಟೆಡ್‌ನಲ್ಲಿ ಸಾಲ ಪಡೆಯುವ ಸಲುವಾಗಿ ಪೊಲೀಸ್ ಇನ್ಸ್‌ಪೆಕ್ಟರ್ ರವರ ಸೀಲನ್ನು ಸಂಬಳ ಚೀಟಿ ಮತ್ತು ಸಂಬಳ ಪ್ರಮಾಣ ಪತ್ರದ ಮೇಲೆ ಹಾಕಿ ಬ್ಯಾಂಕಿಗೆ ನೀಡಿ ಸಾಲ ಪಡೆದು ಪೊಲೀಸ್ ಇನ್ಸ್‌ಪೆಕ್ಟರ್‌ರವರ ಅಧಿಕಾರ ವ್ಯಾಪ್ತಿಯನ್ನು ದುರುಪಯೋಗಪಡಿಸಿಕೊಂಡು ಸಂಜ್ಞೇಯ ಪ್ರಕರಣದಲ್ಲಿ ಭಾಗಿಯಾಗಿ ಶಿಸ್ತು ಇಲಾಖೆಯಲ್ಲಿರುವ ನೀವು ನಿಮ್ಮ ಕರ್ತವ್ಯದಲ್ಲಿ ಅತೀವ ದುರ್ನಡತೆ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಕೇಂದ್ರ ವಿಭಾಗ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 15-11-2003ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರುವಂತೆ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೋಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 03–7–08ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅಧಿಕಾರ ದುರುಪಯೋಗ ಮತ್ತು ಕರ್ತವ್ಯದಲ್ಲಿ ಅತೀವ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 51 ಪೊಸಿಅ 2010 ಬೆಂಗಳೂರು, ದಿನಾಂಕ: 07–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೋಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮಲ್ಲೇಗೌಡ, ನಿವೃತ್ತ ಎ.ಎಸ್.ಐ., ಹೈಗ್ರೌಂಡ್ಸ್ ಪೋಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 338

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೋಲೀಸ್ ಸೇವೆಗಳು)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಎಸ್. ನಿಜಲಿಂಗಪ್ಪ ಸಕ್ಕರೆ ಸಂಸ್ಥೆ, ಬೆಳಗಾವಿ ಈ ಸಂಸ್ಥೆಗೆ 2011–12ನೇ ಸಾಲಿಗೆ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಡಿಎಸ್‌ಕೆ/ಸಿಬ್ಬಂದಿ/35/2010–11, ದಿನಾಂಕ: 09.12.2011
2. ಸರ್ಕಾರದ ಆದೇಶ ಸಂಖ್ಯೆ: ಸಿಐ 100 ಎಸ್‌ಜಿಎಫ್ 2011, ದಿನಾಂಕ: 23–06–2011.
3. ಸರ್ಕಾರದ ಆದೇಶ ಸಂಖ್ಯೆ: ಸಿಐ 100 ಎಸ್‌ಜಿಎಫ್ 2011, ದಿನಾಂಕ: 24–08–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿರುವ ದಿನಾಂಕ: 09.12.2011ರ ಪತ್ರದಲ್ಲಿ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಎಸ್. ನಿಜಲಿಂಗಪ್ಪ ಸಕ್ಕರೆ ಸಂಸ್ಥೆಗೆ 2011–12ನೇ ಸಾಲಿನ ಆಯವ್ಯಯದಲ್ಲಿ ₹ 100.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದ್ದು, ಇದರಲ್ಲಿ 3 ಹಾಗೂ 4ನೇ ತ್ರೈಮಾಸಿಕಕ್ಕೆ ಒಟ್ಟು ₹ 50.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಮೇಲೆ ಓದಲಾದ (2) ಮತ್ತು (3)ರಲ್ಲಿರುವ ಆದೇಶಗಳಲ್ಲಿ ಮೊದಲನೆ ಹಾಗೂ 2ನೇ ತ್ರೈಮಾಸಿಕಕ್ಕೆ ಒಟ್ಟು ₹ 50.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಆಯುಕ್ತರು, ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 100 ಎಸ್‌ಜಿಎಫ್ 2011, ಬೆಂಗಳೂರು, ದಿನಾಂಕ: 10.01.2012**

ಎಸ್. ನಿಜಲಿಂಗಪ್ಪ ಸಕ್ಕರೆ ಸಂಸ್ಥೆ, ಬೆಳಗಾವಿ ಈ ಸಂಸ್ಥೆಯ ಕಾರ್ಯಕ್ರಮಗಳ ಅನುಷ್ಠಾನಕ್ಕೆ 2011–12ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2852–08–201–0–04–059ರಡಿ ಒದಗಿಸಿರುವ ಅನುದಾನದಲ್ಲಿ ಮೂರನೆ ತ್ರೈಮಾಸಿಕ ಕಂತಾಗಿ ₹ 25.00 ಲಕ್ಷಗಳನ್ನು (ರೂಪಾಯಿ ಇಪ್ಪತ್ತೈದು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲಾಗಿದೆ.

ಹಣವನ್ನು ಯಾವ ಉದ್ದೇಶಕ್ಕೆ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಮಾತ್ರ ಬಳಸುವುದು ಹಾಗೂ ಹಣ ಬಳಕೆ ಪ್ರಮಾಣ ಪತ್ರವನ್ನು ತಪ್ಪದೇ ಸರ್ಕಾರಕ್ಕೆ ಸಲ್ಲಿಸುವುದು.

ಹಣ ಸಂದಾಯದ ರಸೀದಿ ಮೇಲೆ ಆಯುಕ್ತರು, ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರ ಮೇಲು ರುಜು ಪಡೆದು ಸದರಿ ಹಣವನ್ನು ಡ್ರಾ ಮಾಡುವ ಅಧಿಕಾರವನ್ನು ನಿರ್ದೇಶಕರು, ಎಸ್. ನಿಜಲಿಂಗಪ್ಪ ಸಕ್ಕರೆ ಸಂಸ್ಥೆ, ಬೆಳಗಾವಿ ಇವರಿಗೆ ನೀಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಟಿಪ್ಪಣಿ ಸಂಖ್ಯೆ: ವಾಕೈ 241 ಆಂಆಸ(1) 2011, ದಿನಾಂಕ: 28.12.2011 ರಲ್ಲಿ ನೀಡಿರುವ ಸಹಮತಿಯನ್ವಯ ಹಾಗೂ ಸರ್ಕಾರದ ಆಡಳಿತ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಶಂಕರ ನಾಯಕ್ ಎಲ್**

ಪಿ.ಆರ್. 339

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ha. of forest land in Gunda RF, Hospet Taluk of Bellary District for widening of road 4/6 lane from Km 298.500 to Km 299.200 in NH 13 (Bijapur-Hospet Section) in favour of the DGM (Tech) and Project Director. National Highways Authority of India, Dharwad subject to certain conditions.

The proposal has been examined in detail and hence the order.

**Government Order No. FEE 97 FLL 2010, Bangalore Dated:07/01/2012.**

In the circumstances explained above in the preamble, the Government is pleased to accord sanction under Section 2 of the Forest (Conservation) Act, 1980 for diversion of 1.90 ha. of forest land in Gunda RF, Hospet Taluk of Bellary District for widening of road 4/6 lane from Km 298.500 to Km 299.200 in NH 13 (Bijapur-Hospet Section) in favour of the DGM (Tech) and Project Director, National Highways Authority of India, Dharwad, subject to the following conditions:

1. The legal status of the forest land shall remain unchanged.
2. Demarcation of the proposed forest area shall be carried out by erecting permanent RCC boundary pillars duly numbered at an interval of 20 mts. At the cost of user agency.
3. The compensatory afforestation shall be raised over double the extent of degraded forest land (3.80 ha.) at the cost of user agency.
4. Avenue plantation shall be raised on either side of the road at the cost of user agency.
5. The additional amount of the Net Present Value (NPV) of the diverted forest land if any becoming due after revision of the same by the Hon'ble Supreme Court of India in future, shall be charged by the State Government from the user agency and the same shall be transferred to either in SB A/c No. SB01025213-CAF Karnataka, Corporation Bank, CGO Complex, Lodhi Road, New Delhi-110003 (RTGS/IFSC No. CORP0000371) or in SB A/c No. 344902010105421-KARNATAKA CAMPA, Union Bank of India, Sundar Nagar, New Delhi-110003 (RTGS/IFSC No. UBIN0534498).
6. The total forest area utilized for the project shall not exceed 1.90 ha. In case the land is not taken over by the user agency or the same is not used for the stipulated purpose within a period of two years, then the area shall be taken back by the Forest Department.
7. The lessee shall pay lease rent as fixed by the Government; from time to time.
8. The lease tenure is for a period of 20 years.
9. The leased out area should be used for the purpose for which it is granted. In case the land is not used for the stipulated purpose within one year or when it is no longer needed for the stipulated purpose, the area should be resumed to the Forest Department under Section 82 of Karnataka Forest Act, 1963. The concerned Deputy Conservator of Forests is authorized to take necessary action in this regard. No residential building shall be permitted in the proposed area.
9. Karnataka Forest Act 1963 and Rules 1969 and other relevant Acts & Rules will be applicable for any violation.
10. Only minimum number trees shall be cut out of the enumerated list base on actual requirement of the project.
11. The user agency shall pay the extraction and transportation charges for trees as estimated by the Deputy Conservator of Forests from proposed forest land.
12. Compensatory afforestation shall be raised at the cost of User Agency over degraded forest area twice the extent of forest area being diverted at the rate prevailing at the time of approval (at present it is Rs. 1,05,000/- per ha.) Or any extent as approved by the Ministry of Environment and Forests.
13. The User Agency shall pay the Net Present Value (NPV) as per Orders dated 28-3-2008 and 9-5-2008 of the Hon'ble Supreme Court of India.
14. The User Agency shall ensure that there should be no damage to the available fauna and other flora.
15. No crushing/breaking of stone shall be allowed inside forest area, Readymade material shall be used for up-gradation of such roads.
16. Road side plantation shall be taken up along the road at the project cost immediately. The plantation shall be maintained at the project cost.
17. No labour camp shall be established on the forest lands.
18. No work shall be allowed after sunset.
19. Any damage to forest area due to such up-gradation works shall be compensated by the User Agency. The extent of damage shall be assessed by the concerned Deputy Conservator of Forests.
20. The User agency shall not sub-lease, mortgage and hypothecate the forest area.
21. The User Agency shall abide by all the conditions imposed upon by the Government of India, the Government of Karnataka and the Principal Chief Conservator of Forests (HOFF).
22. Any other conditions that the Additional principal Chief Conservator of Forests (Central) Regional Office, Bangalore may impose from time to time for protection, improvement of flora and fauna in the forest area and public convenience, shall also be applicable.

By Order and in the name of the Governor of Karnataka,

**G.H. Anasuyamma**

Under Secretary to Government

Forest, Ecology & Environment Department

PR. 359

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಶ್ರೀ ಮೋಟಪ್ಪ, ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ ಮಡಿಕೇರಿ, ಶ್ರೀ ಚಂದ್ರಶೇಖರಯ್ಯ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ ಮಡಿಕೇರಿ ಮತ್ತು ಶ್ರೀ ನರಸಿಂಹಶೆಟ್ಟಿ, ವಲಯ ಅರಣ್ಯಾಧಿಕಾರಿ, ವನ್ಯಜೀವಿ ವಲಯ, ಮಾಕುಟ್ ಇವರುಗಳು ಎಸಗಿದ ಕರ್ತವ್ಯ ಲೋಪದ ಕುರಿತು ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ:** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಬೆಂಗಳೂರು ರವರ ಪತ್ರ ಸಂಖ್ಯೆ: ಸಿ2/ಡಬ್ಲ್ಯೂಎಲ್/ಸಿಆರ್–54/2011–12, ದಿನಾಂಕ: 23–12–2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ ಓದಲಾದ ದಿನಾಂಕ: 23–12–2011ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ), ಬೆಂಗಳೂರುರವರು ಮಡಿಕೇರಿಯ ಉಪ ಅರಣ್ಯ ಸಂರಕ್ಷಣಾಧಿಕಾರಿರವರೊಂದಿಗೆ ಮಡಿಕೇರಿ ವಿಭಾಗದ ನಂ. 24, ಬ್ರಹ್ಮಗಿರಿ ಪಕ್ಷಿಧಾಮ ಮತ್ತು ಮಾಕುಟ್ ವನ್ಯಜೀವಿ ವಿಭಾಗವನ್ನು ಖುದ್ದು ತನಿಖೆ ಮಾಡಲಾಗಿ ಸದರಿ ವಿಭಾಗಕ್ಕೆ ಹೊಂದಿಕೊಂಡ ಹಸಿರು ಕಾಡಿನಲ್ಲಿ ಗಾಂಜಾ ಬೆಳೆಯನ್ನು ಬೆಳೆಯುತ್ತಿದ್ದು, ಈ ರೀತಿ ಅಕ್ರಮವಾಗಿ ಗಾಂಜಾ ಬೆಳೆಯನ್ನು ಬೆಳೆಯುವಲ್ಲಿ ಸದರಿ ವಿಭಾಗದ ಅರಣ್ಯ ಇಲಾಖೆಯ ಕಳ್ಳಬೇಟೆ ತಡೆಯುವ ಕ್ಯಾಂಪ್‌ನವರು ಗಾಂಜಾ ಬೆಳೆಯಲು ಕಾಫಿ ಎಸ್ಟೇಟ್ ಮಾಲೀಕರೊಂದಿಗೆ ಶಾಮೀಲಾಗಿ ಅರಣ್ಯ ವಿಭಾಗ 3 ಎಕರೆ ಪ್ರದೇಶದಲ್ಲಿ ಬೆಳೆದಿದ್ದಂತಹ ಮರಗಳನ್ನು, ಸಸಿಗಳನ್ನು ನಾಶ ಮಾಡಿರುವುದು ಕಂಡು ಬಂದಿರುತ್ತದೆ. ಈ ರೀತಿ ನಾಶ ಮಾಡಿದ ಬ್ರಹ್ಮಗಿರಿ ಪಕ್ಷಿಧಾಮದ ನಿತ್ಯ ಹರಿದ್ವರ್ಣದ ಕಾಡಾಗಿದ್ದು, ಇದು ತಡಸಾಲ್, ನಂದಿ, ತಾರೆ, ಕಿರಲ್‌ಬೋಗಿ, ಮಾವು, ನೇರಲು ಮತ್ತು ಇತ್ಯಾದಿ ಅತ್ಯಂತ ಬೆಲೆಬಾಳುವ ಜಾತಿಯ ಮರಗಳಾಗಿರುತ್ತವೆ. ಈ ರೀತಿ ನಾಶಪಡಿಸಿದ ಕಡಿತದಂತಹ ಮರಗಳು 80 ಸೆಂಟರ್ ಅಳತೆಯುಳ್ಳ ಮರಗಳಾಗಿರುತ್ತವೆ. ಇದಲ್ಲದೆ, ಆ ಪ್ರದೇಶದಲ್ಲಿ ಕೆಲವೊಂದು ವಿಶೇಷ ಜಾತಿಯ ಗಿಡ ಮರಗಳನ್ನು ನಾಶಪಡಿಸಿರುವುದಾಗಿದೆ. ಹಾಗೇ ನಾಶಪಡಿಸಿದಂತಹ ಸದರಿ ಪ್ರದೇಶದಲ್ಲಿ ಗಾಂಜಾ ಸಸಿಗಳನ್ನು ಬೆಳೆಯಲಾಗಿದೆ. ಈ ಕೃತ್ಯದ ಬಗ್ಗೆ ಮಡಿಕೇರಿ ವನ್ಯಜೀವಿ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ವಲಯ ಅರಣ್ಯಾಧಿಕಾರಿಯವರು ದಿನಾಂಕ: 21–11–2011 ರಂದು ತಪಾಸಣೆ ಮಾಡಿರುತ್ತಾರೆ. ಈ ಬಗ್ಗೆ ಗೋಣಿಕುಪ್ಪ, ಪೊಲೀಸ್ ಠಾಣೆಯಲ್ಲಿ ಕ್ರಿಮಿನಲ್ ಮೊಕದ್ದಮೆಯನ್ನು ದಾಖಲಿಸಲಾಗಿತ್ತು. ಇಬ್ಬರು ಅರಣ್ಯ ವೀಕ್ಷಕರನ್ನು ಅಭಿರಕ್ಷೆಗೆ ತೆಗೆದುಕೊಳ್ಳಲಾಗಿದೆ. ಈ ರೀತಿ ನಿತ್ಯ ಹರಿದ್ವರ್ಣದ ಜೀವಿ ವೈವಿಧ್ಯದ ಕಾಡನ್ನು ನಾಶಪಡಿಸಿ ಅದರಲ್ಲಿ ಗಾಂಜಾ ಬೆಳೆಯನ್ನು ಬಹುಶಃ ಮುಂಗಾರು ಸಮಯದಲ್ಲಿ ಬೆಳೆಯುತ್ತಾರೆ. ಈ ಬಗ್ಗೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಮಡಿಕೇರಿರವರ ಕಛೇರಿಯ ದಾಖಲೆಗಳಲ್ಲಿ ಕುಟ್ಟಂಡಿ ಗ್ರಾಮಸ್ಥರು ದೂರನ್ನು ನೀಡಿದ್ದು ಮತ್ತು ಈ ದೂರಿನ ಪ್ರತಿಯನ್ನು ವಲಯ ಅರಣ್ಯಾಧಿಕಾರಿ (ವನ್ಯಜೀವಿ), ಮಾಕುಟ್ ಹಾಗೂ ಮಡಿಕೇರಿ ವಿಭಾಗದ ಅರಣ್ಯ ಸಂರಕ್ಷಣಾಧಿಕಾರಿಗಳಿಗೂ ಕಳುಹಿಸಿರುತ್ತಾರೆ. ಸದರಿ ದೂರಿನ ಪ್ರತಿಯನ್ನು ಅರಣ್ಯ ಸಂರಕ್ಷಣಾಧಿಕಾರಿಗಳು, ಮಡಿಕೇರಿ ವನ್ಯಜೀವಿ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗೂ ಹಾಗೂ ಆ ವಿಭಾಗದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಿಗೂ ತನಿಖೆ ಮಾಡಿ ಸೂಕ್ತ ಕ್ರಮ ಕೈಗೊಳ್ಳಲು ಕಳುಹಿಸಿರುತ್ತಾರೆ. ಆದರೆ, ಸದರಿ ಅಧಿಕಾರಿಗಳು ಯಾವುದೇ ಕ್ರಮವನ್ನು ಕೈಗೊಳ್ಳದೆ ತಟಸ್ಥರಾಗಿ ಉಳಿದಿರುತ್ತಾರೆ. ಇದರಿಂದ ವ್ಯಕ್ತವಾಗುವುದೇನೆಂದರೆ, ಇಡೀ ವ್ಯವಸ್ಥೆಯು ಕುಸಿತವಾಗಿದ್ದು, ಈ ಬಗ್ಗೆ ಸಂಬಂಧಪಟ್ಟ ಉಪ ಅರಣ್ಯ ಸಂರಕ್ಷಣಾಧಿಕಾರಿ/ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ/ವಲಯ ಅರಣ್ಯಾಧಿಕಾರಿ ಮತ್ತು ವನಪಾಲಕ ಇವರುಗಳು ನಿಯತವಾಗಿ ಅರಣ್ಯ ಪ್ರದೇಶವನ್ನು ಉಸ್ತುವಾರಿ ಮಾಡಿ ಮತ್ತು ಸಕಾಲಿಕವಾಗಿ ಗಸ್ತು ವ್ಯವಸ್ಥೆಯನ್ನು ಕೈಗೊಂಡಿದ್ದರೆ, ಈ ಅಕೃತ್ಯವು ನಡೆಯುತ್ತಿರಲಿಲ್ಲ. ಆದ್ದರಿಂದ, ಸದರಿ ಪ್ರದೇಶದ ಅರಣ್ಯವು ನಾಶವಾಗಲು ಈ ಕೆಳಕಂಡ ಅಧಿಕಾರಿಗಳು ಕಾರಣರಾಗಿರುವುದು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ), ಬೆಂಗಳೂರುರವರ ಸ್ಥಳ ತನಿಖೆಯಿಂದ ಕಂಡು ಬಂದಿರುತ್ತದೆ.

1. ಶ್ರೀ ಮೋಟಪ್ಪ, ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಮಡಿಕೇರಿ
2. ಶ್ರೀ ಚಂದ್ರಶೇಖರಯ್ಯ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಮಡಿಕೇರಿ.
3. ಶ್ರೀ ನರಸಿಂಹ ಶೆಟ್ಟಿ, ವಲಯ ಅರಣ್ಯಾಧಿಕಾರಿ, ವನ್ಯಜೀವಿ ವಲಯ, ಮಾಕುಟ್,
4. ಶ್ರೀ ರಾಕೇಶ್ ಸೊಲಾಪುರ್, ವನಪಾಲಕ, ಸೊಳ್ಳೆಕೊಳ್ಳಿ, ವಿಭಾಗ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಯವರ ವರದಿಯು ವಾಸ್ತವಾಂಶಗಳಿಂದ ಕೂಡಿದ್ದು, ಸತ್ಯಯುತವಾಗಿರುತ್ತದೆ. ಇದರಿಂದ, ಈ ಮೇಲೆ ಹೇಳಿದ ಅಧಿಕಾರಿ/ನೌಕರರುಗಳು ತಮ್ಮ ಕರ್ತವ್ಯ ಪಾಲನೆಯಲ್ಲಿ ಅತೀವ ಕರ್ತವ್ಯ ನಿರ್ಲಕ್ಷತೆ ತೋರಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಕಂಡು ಬರುವುದರಿಂದ, ಅವರುಗಳು ಎಸಗಿದ ಕರ್ತವ್ಯ ನಿರ್ಲಕ್ಷ್ಯತೆಗಾಗಿ ಅವರುಗಳನ್ನು ಅಮಾನತ್ತಿನಲ್ಲಿಡಲು ಸರ್ಕಾರವು ನಿರ್ಧರಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 122 ಅಇವಿ 2011, ಬೆಂಗಳೂರು, ದಿನಾಂಕ: 24–12–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ರಾಕೇಶ್ ಸೊಲಾಪುರ್, ವನಪಾಲಕ, ಸೊಳ್ಳೆಕೊಳ್ಳಿ, ವಿಭಾಗ ಇವರನ್ನು ಈಗಾಗಲೇ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಮಡಿಕೇರಿ ಇವರು ಅಮಾನತ್ತುಗೊಳಿಸಿರುವುದರಿಂದ, ಈ ಕೆಳಗೆ ಹೇಳಲಾಗಿರುವ ಅಧಿಕಾರಿಗಳು ತಮ್ಮ ಕರ್ತವ್ಯ ನಿರ್ವಹಣೆಯನ್ನು ಸರಿಯಾಗಿ ನಿರ್ವಹಿಸದೇ ಅರಣ್ಯ ಸಂಪತ್ತನ್ನು ನಾಶವಾಗಲು ಕಾರಣವಾಗಿರುವುದು ಸ್ಪಷ್ಟವಾಗಿ ಕಂಡು ಬರುವುದರಿಂದ ಮತ್ತು ಆ ಸಂಬಂಧ ಎಸಗಿದ ತೀವ್ರ ದುರ್ನಡತೆ ಮತ್ತು ಕರ್ತವ್ಯ ಲೋಪಗಳಿಗಾಗಿ ಅವರುಗಳನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1)(d)ರನ್ವಯ ಪ್ರದತ್ತವಾದ ಅಧಿಕಾರವನ್ನು ಸರ್ಕಾರವು ಚಲಾಯಿಸಿ, ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಈ ಕೆಳಕಂಡ 3 ಜನ ಅಧಿಕಾರಿಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಪಡಿಸಿ ಆದೇಶಿಸಿದೆ.

1. ಶ್ರೀ ಮೋಟಪ್ಪ, ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಮಡಿಕೇರಿ
2. ಶ್ರೀ ಚಂದ್ರಶೇಖರಯ್ಯ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಮಡಿಕೇರಿ.
3. ಶ್ರೀ ನರಸಿಂಹ ಶೆಟ್ಟಿ, ವಲಯ ಅರಣ್ಯಾಧಿಕಾರಿ, ವನ್ಯಜೀವಿ ವಲಯ, ಮಾಕುಟ್

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಗಳು ನಿಯಮಾನುಸಾರ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಗಳು ಸಕ್ಷಮ ಪ್ರಾಧಿಕಾರದ ಅನುಮತಿ ಇಲ್ಲದೆ ಕೇಂದ್ರ ಸ್ಥಾನವನ್ನು ಬಿಟ್ಟು ತೆರಳಕೂಡದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎಸ್. ಗುರುಸಿದ್ದಯ್ಯ**

ಪಿ.ಆರ್. 360

ಸರ್ಕಾರದ ಉಪ ಕಾರ್ಯದರ್ಶಿ

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ಬಣಜಾರ ಬಾಲಕರ ವಿದ್ಯಾರ್ಥಿನಿಲಯ ಸಂಸ್ಥೆ (ರಿ) ಚಿತ್ರದುರ್ಗ ಈ ಸಂಸ್ಥೆಗೆ ಆಡಳಿತಾಧಿಕಾರಿಗಳನ್ನು ನೇಮಿಸುವ ಬಗ್ಗೆ

**ಓದಲಾಗಿದೆ:** 1) ಸಹಕಾರ ಸಂಘಗಳ ನಿಬಂಧಕರು ಬೆಂಗಳೂರು ಇವರ ಪತ್ರ ಸಂಖ್ಯೆ: ಆರ್‌ಸಿಎಸ್/ ಎಡಿಎಂ/168/ಎಸ್‌ಓಆರ್-1/2009-10 ದಿನಾಂಕ 31/5/2011

2) ಕಾರಣ ಕೇಳುವ ನೋಟಿಸು ಸಂಖ್ಯೆ:ಸಇ 68 ಸಸಂನೋ 2011, ದಿನಾಂಕ 24/06/2011

3) ಸಹಕಾರ ಸಂಘಗಳ ನಿಬಂಧಕರು ಬೆಂಗಳೂರು ಇವರ ಪತ್ರ ಸಂಖ್ಯೆ: ಆರ್‌ಸಿಎಸ್/ ಎಡಿಎಂ/168/ಎಸ್‌ಓಆರ್-1/2008-09 ದಿನಾಂಕ 09/11/2011

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ದಿನಾಂಕ: 31/05/2011 ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಬೆಂಗಳೂರು ಇವರು ಬಣಜಾರ ಬಾಲಕರ ವಿದ್ಯಾರ್ಥಿನಿಲಯ ಸಂಸ್ಥೆ (ರಿ) ಚಿತ್ರದುರ್ಗ ಇದರ ಕಾರ್ಯದರ್ಶಿಗೆ ಮಾಹಿತಿ ಹಾಗೂ ದಾಖಲೆಗಳನ್ನು ಸಲ್ಲಿಸಲು ನೋಟೀಸ್ ನೀಡಿದರು ಗೈರು ಹಾಜರಾಗಿ ದಾಖಲೆಗಳನ್ನು ಸಲ್ಲಿಸಿರುವುದಿಲ್ಲ. ಕಳೆದ ಏಳು ವರ್ಷಗಳಿಂದಲೂ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 11ರನ್ವಯ ಪ್ರತಿ ವರ್ಷ ಸರ್ವ ಸದಸ್ಯರ ವಾರ್ಷಿಕ ಮಹಾ ಸಭೆಯನ್ನು ಜರುಗಿಸಿರುವುದಿಲ್ಲ ಹಾಗೂ ಕಲಂ 13 ರನ್ವಯ ಪ್ರತಿ ವರ್ಷ ಲೆಕ್ಕ ಪತ್ರಗಳನ್ನು ಮತ್ತು ಕಾರ್ಯಕಾರಿ ಸಮಿತಿ ಸದಸ್ಯರ ಪಟ್ಟಿಯನ್ನು ಸಲ್ಲಿಸಲು ವಿಫಲರಾಗಿರುತ್ತಾರೆ.

ಸಂಘದ ಬೈಲಾ ಕ್ರಮ ಸಂಖ್ಯೆ:8(1) ರನ್ವಯ ಪ್ರತಿ 3 ವರ್ಷಕ್ಕೊಮ್ಮೆ ಚುನಾವಣೆ ನಡೆಸಿ ಸಂಘದ ಕಾರ್ಯಕಾರಿ ಸಮಿತಿ ಆಯ್ಕೆ ಮಾಡಬೇಕಾಗಿದ್ದು, ಕಳೆದ 7 ವರ್ಷಗಳಿಂದಲೂ ಚುನಾವಣೆ ನಡೆಸಿರುವುದಿಲ್ಲ ಸಮಾಜ ಕಲ್ಯಾಣ ಇಲಾಖೆಯಿಂದ ಪ್ರತಿ ವರ್ಷ ಅನುದಾನ ಪಡೆದು ಲೆಕ್ಕಪತ್ರ ಸರಿಯಾಗಿ ನಿರ್ವಹಿಸಿರುವುದಿಲ್ಲ. ಸಂಘದಲ್ಲಿ ಅವಶ್ಯಕ ದಾಖಲೆಗಳನ್ನು ನಿರ್ವಹಿಸಿರುವುದಿಲ್ಲವೆಂದು ದೂರುಗಳು ಬಂದಿರುತ್ತವೆ. ಅದರಿಂದ ಸಂಘದ ಹಿತದೃಷ್ಟಿಯಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27(ಎ)(1) ರನ್ವಯ ಆಡಳಿತಾಧಿಕಾರಿಯನ್ನಾಗಿ ಉಪ ಕಾರ್ಯದರ್ಶಿಗಳು ಜಿಲ್ಲಾ ಪಂಚಾಯತ್, ಚಿತ್ರದುರ್ಗ ಅಥವಾ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಚಿತ್ರದುರ್ಗ ಇವರನ್ನು ನೇಮಕ ಮಾಡುವುದು ಸೂಕ್ತವೆಂದು ಸಹಕಾರ ಸಂಘಗಳ ಉಪ ನಿಬಂಧಕರು ಚಿತ್ರದುರ್ಗ ರವರು ಶಿಫಾರಸ್ಸು ಮಾಡಿದ್ದು ಅದನ್ನು ಪರಿಗಣಿಸಿ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ದಿನಾಂಕ: 24/06/2011 ರ ಕಾರಣ ಕೇಳುವ ನೋಟಿಸಿನಲ್ಲಿ ಸಂಘದವರು ಸಂಘದಲ್ಲಿ ಮಾಡಿರುವ ಬೈಲಾ ಉಲ್ಲಂಘನೆ ಹಾಗೂ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 11 ಹಾಗೂ 13 ಉಲ್ಲಂಘನೆ ಮಾಡಿರುವುದು ಮೇಲ್ನೋಟಕ್ಕೆ ಕಂಡು ಬಂದಿದ್ದು ಸಂಘದ ಸದಸ್ಯರ ಹಿತದೃಷ್ಟಿಯಿಂದ ಹಾಗೂ ಸ್ವೀಕೃತವಾದ ದೂರಿನ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳಲು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27(ಎ)(1) ರನ್ವಯ ಸಂಘಕ್ಕೆ ಆಡಳಿತಾಧಿಕಾರಿಯನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ನಿಮ್ಮ ಲಿಖಿತ/ಮೌಖಿಕ ಹೇಳಿಕೆಯನ್ನು ಪತ್ರ ತಲುಪಿದ 15 ದಿನಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸುವುದು ತಪ್ಪಿದಲ್ಲಿ ನೀವು ಹೇಳುವುದು ಏನೂ ಇಲ್ಲವೆಂದು ಭಾವಿಸಿ ನಿಯಮಾನುಸಾರ ಮುಂದಿನ ಸೂಕ್ತ ಕ್ರಮ ಜರುಗಿಸಲಾಗುವುದೆಂದು ತಿಳಿಸಲಾಗಿದೆ ಸದರಿ ನೋಟಿಸಿಗೆ ಸಂಘದ ಅಧ್ಯಕ್ಷರು ದಿನಾಂಕ 16/08/2011 ರಂದು ಹೇಳಿಕೆಯನ್ನು ನೀಡಿ ಆಡಳಿತ ಮಂಡಳಿಯಲ್ಲಿ ವಿವಾದಗಳು ಇರುವುದರಿಂದ ಆಡಳಿತಾಧಿಕಾರಿಯನ್ನು ನೇಮಿಸುವಂತೆ ಕೋರಿರುತ್ತಾರೆ ಸದರಿ ಹೇಳಿಕೆಯನ್ನು ಲಗತ್ತಿಸಿ, ನಿಯಮಾನುಸಾರ ಪರಿಶೀಲಿಸಿ, ನಿಮ್ಮ ಅಭಿಪ್ರಾಯವನ್ನು ತಿಳಿಸುವಂತೆ ದಿನಾಂಕ 2/9/2011 ರಂದು ಸಹಕಾರ ಸಂಘಗಳ ನಿಬಂಧಕರಿಗೆ ಪತ್ರವನ್ನು ಬರೆಯಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (3) ರ ದಿನಾಂಕ 9/11/2011ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಬೆಂಗಳೂರು ಇವರು ಕರ್ನಾಟಕ ಸಂಘಗಳ ಉಪ ನಿಬಂಧಕರು ಚಿತ್ರದುರ್ಗ ಇವರು ದಿನಾಂಕ 7/5/2011 ರಲ್ಲಿ ಸಲ್ಲಿಸಿರುವ ವರದಿಯನ್ವಯ ಬಣಜಾರ ಬಾಲಕರ ವಿದ್ಯಾರ್ಥಿ ನಿಲಯ ಸಂಸ್ಥೆ (ರಿ) ಚಿತ್ರದುರ್ಗ ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27(ಎ)(1) ರನ್ವಯ ಆಡಳಿತಾಧಿಕಾರಿಯನ್ನು ನೇಮಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 68 ಸಸಂನೋ 2011, ಬೆಂಗಳೂರು, ದಿನಾಂಕ: 09-01-2012**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಬಣಜಾರ ಬಾಲಕರ ವಿದ್ಯಾರ್ಥಿ ನಿಲಯ ಸಂಸ್ಥೆ (ರಿ) ಚಿತ್ರದುರ್ಗ ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27(ಎ)(1) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಹಕಾರ ಸಂಘಗಳ ಉಪ ನಿಬಂಧಕರು ಹಾಗೂ ಜಿಲ್ಲಾ ನೋಂದಣಾಧಿಕಾರಿ ಚಿತ್ರದುರ್ಗ ಇವರನ್ನು ಆಡಳಿತಾಧಿಕಾರಿಯಾಗಿ ಆರು (6) ತಿಂಗಳ ಅವಧಿಗೆ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಸಂಘಕ್ಕೆ ಚುನಾವಣೆಯನ್ನು ನಡೆಸಿ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಹಾಗೂ ಸರ್ಕಾರಕ್ಕೆ ವರದಿ ಮಾಡುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 362

**ಎ.ಎಸ್. ವಿಶ್ವೇಶ್ವರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ-2

ಸಹಕಾರ ಇಲಾಖೆ

## HOME SECRETARIAT

**Sub :** Constitution of Tender Scrutinizing Committee and prescription of various Authorities in Home Department for procurement of goods and services under the KTPP Act, 1999 and the Rules framed there under and other related matters.

**Ref :** 1) G.O. No. HD 14 PFS 2010 dated: 03-02-2011.
2) Letter No. Stores-2[2]58/2001-02 dated: 19-11-2011 from the Director General & Inspector General of Police, Bangalore.
3) GO No. HD 171 EFS 2010 dated: 03-01-2012.

**Preamble:**

In the Government Order read at (1) above, Government has issued orders constituting Tender Inviting Authority, Tender Scrutinizing Committee & Tender Accepting Authority and prespcription of various Authorities in Home Department for procurement of goods and services under the KTPP Act, 1999 and Rules framed there under and other related matters.

The Director General & Inspector General of Police, Bangalore in his letter read (2) above, has requested to reconsider the order issued vide GO No. HD 14 PFS 2010 dated: 03-02-2011 so as to avoid procedural delays in sanction and consequent lapse of grants.

In Government Order read at [3] above, Government has issued special Financial Powers to the Director General and Inspector General of Police, Commissioner of Police and other Head of Department & District Level Officers of Police Department.

The proposal of the Director General & Inspector General of Police, Bangalore has been examined in the light of the Government Order read at [3] above regarding delegation of special financial powers to the Director General and Inspector General of Police, Bangalore & other level officers of Police Department and also the present system of procuring items through Karnataka State Police Housing Corporation Limited. It was noted that although sanction for procurement was given by the Government, the Police Department in most of the cases did not procure the items within the relevant financial year sanctioned and also in most cases the provision contained in KTPP Act 1999 and rules framed there under were not followed. It was further noticed that the practice of authorizing Chairman and Managing Director, Karnataka State Police Housing Corporation to call tender, to approve and to procure the goods excluding construction of building is improper and not authorised under the KTPP Act and rules framed there under or under the Karnatka Financial Code, where funds are earmarked to Director General of Police/Heads of Departments coming under the control of Home Department. In several cases prior exemption from Government under KTPP Act. 1999 were not sought and proposals were submittted for post facto approval. Therefore in order to ensure that all purchases under Central & States Schemes are made as per KTPP Act & Rules in respect of the Police Department and other Departments coming under the control of Home Department, the following order are issued to further streamline the procurements of goods & services.

**Government Order No. HD 146 EFS 2010, Bangalore Dated: 13-01-2012.**

In the detailed circumstances explained in the preamble portion of this order and in modification of Government Order read at [1] above, the Tender Inviting Authority, Tender Scrutinizing Authority & Tender Accepting Authority for procurement of goods and services under KTPP Act, 1999 and Rules framed there under, where the value of procurement is less than Rs. 1.00 crore and Rs. 1.00 Crore and above in respect of Police Department and other departments coming under the administrative control of Home Department shall be as follows, subject to conditions mentioned below:-

| Sl.No. | Value of the Procurement | Tender Inviting Authority | Tender Scrutinizing Authority | Tender Accepting Authority |
|---|---|---|---|---|
| 1 | Less than Rs. 1 crores | Head of the Department other than Police Depart- ment | Head of the Department other than Police Depart- ment | Head of the Department other than Police Depart ment |
| 2 | *Upto 5 crores<br>*Note: as per the delegation of powers issued from time to time and also as per special final powers delegated vide GO No. HD 171 EFS 2010 dated: 03-01-2012 | DG &IGP | DG & IGP | DG & IGP |
| 3 | Rs. 1 crore and less than Rs. 5 crores | Head of the Department other than Police Depart- ment | Head of the Department other than Police Depart- ment | Principal Secretary/Secr etary [PCAS] to Government, Home Department |

| | | | | |
|---|---|---|---|---|
| 4 | above Rs. 5 crores | DG & IGP or concerned Head of the Department coming under the Control of Home Department | Committee constituted under the Chairmanship of Principal Secretary/Secretary [PCAS] to Government in terms of this GO | Government in Home Department |

**Conditions**

1. All purchases should be made strictly in accordance with the procedure prescribed under the KTPP Act, 1999 and the Rules framed there under.
2. The Director General and Inspector General of Police/Concerned Head of Department coming under the control of Home Department shall exercise financial powers within the limits delegated to him by the Government from time to time.
3. In respect of items of expenditure exceeding five crores in respect of Director General and Inspector General of Police and exceeding one crore in respect of Heads of Departments coming under the control of Home Department shall be sent to the Government for approval.
4. Details of tender & the specific proposal with the final vendor on the basis of the KTPP Act, 1999 and the Rules framed under beyond the financial powers delegated shall be sent to Government for approval with the recommendation of the Director General & Inspector General of Police/Heads of Department coming under the control of Home Department. Only thereafter shall final order be placed with the vendor for supply.
5. The power delegated under this order shall not be delegated further by the Director General & Inspector General of Police/Heads of Departments coming under the control of Home Department to the sub-ordinate officers.
6. The practice of authorizing Chairman and Managing Director of the Karnataka State Police Housing Corporation to call tender, to approve and to procure **the goods** excluding construction of building is improper and not authorized under the KTPP Act and the rules framed there under or under the Karnataka Financial Code **where funds are earmarked to Director General of Police/Heads of Departments coming under the control of Home Department**. That being so placing budget allocated funds to procure equipments to any authority outside the Government such as a Corporation owned by the Government is improper and such delegation, if any done in the past, shall stand withdrawn with immediate effect.
7. The calling of tenders for procurement of goods and incurring the expenditure thereon **under no circumstances whatsoever shall exceed the budgetary allocation** under the given head for the said approved items and shall not spill over to the succeeding year. Any deviation in this regard shall render the Authority issuing such order liable for refund of the funds to the Government.
8. The Tender Calling Authority, Scrutiny Authority and Tender Accepting Authority shall process these tenders subject to the limits of financial powers delegated to them from time to time & special powers delegated vide Government order No. HD 171 EFS 2010 dated: 03-01-2012 in respect of Director General and Inspector General of Police and other financial orders issued by Finance Department from time to time in respect of Heads of Department Coming under the control of Home Department.
9. No procurement shall be done without following the procedure laid down under the KTPP Act 1999 and the rules framed there under. Exemption in emergency cases or cases of single manufacturer of special goods, etc., if necessary **shall be obtained before placing supply orders or before procuring any goods or services.** Requests for exemption under the KTPP Act 1999 & the rules framed there under after procuring or placing orders shall be summarily rejected and the officers issuing such order without prior permission of Government shall be held personally responsible.
10. All procurements included in and approved in the Annual Budget Programme shall be completed before the closure of the relevant financial year. The procured goods shall be taken to stock and payment shall be made before 31$^{st}$ March of the relevant financial year.
11. These instructions will come into effect immediately in respect of all cases including the cases on hand.
12. These orders will not apply to CCTNS Project. However the provision of KTPP Act, 1999 and the rules framed there under shall apply to the CCTNS Project.

Further the Tender Scrutinizing Committee for expenditure on items above Rs. 5.00 crores in respect of Police Department is reconstituted under the Chairmanship of Principal Secretary to Government, Home Department as below:-

| | | | |
|---|---|---|---|
| 1) | The Principal Secretary to Government, Home Department | - | Chairman |
| 2) | The Director General & Inspector General of Police, Bangalore | - | Member |
| 3) | JCF, DG & IGP Office, Bangalore | - | Member |
| 4) | Internal Financial Advisor, Home Department | - | Member |
| 5) | Co-opt any officer as member of the above committee | - | Member |
| 6) | Additional Director General of Police (Administration) or concerned Additional Director General of Police (He shall place the concerned file along with a detailed note before the committee) | - | Convener |

In respect of Heads of Departments other than the Police Department coming under the administrative control of the Home Department namely, Fire & Emergency Services, Prison, Sainik Welfare & Resettlement, Home Guards & Civil Defense, Department of Prosecution for items of expenditure amounting to Rs. 5 crores and above the Tender scrutinizing Committee is reconstituted under the Chairmanship of Principal Secretary/Secretary [PCAS] to Government, Home Department as below:-

| | | | |
|---|---|---|---|
| 1) | The Principal Secretary to Government /Secretary to Government [PCAS], Home Department | - | Chairman |
| 2) | Head of Department concerned | - | Member |
| 3) | Internal Financial Advisor, Home Department | - | Member |
| 4) | Co-opt any officer as member of the above committee | - | Member |
| 5) | Concerned Director/Joint Director of HOD | - | Convener |

This order is issued as per delegation of powers delegated to Secretaries of Administrative Departments issued vide GO No. FD 1 TFP 2008 dated: 16-05-2008.

By Order and in the name of the Governor of Karnataka,

**B. Rajamma**

Under Secretary to Government

(Police Expenditure)

Home Department

PR. 363

## ಕಾರ್ಮಿಕ ಸಚಿವಾಲಯ

**ವಿಷಯ :** ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಮೆಡಿಕಲ್ ಎಲೆಕ್ಟ್ರಾನಿಕ್ಸ್ ವೃತ್ತಿ ಘಟಕವನ್ನು ಪ್ರಾರಂಭಿಸುವ ಕುರಿತು.

**ಓದಲಾಗಿದೆ :** ಆಯುಕ್ತರು ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂಖ್ಯೆ: ಉತನಿ/ತ/ಯೋ–2/ವಿವ–10/2006–07, ದಿನಾಂಕ: 25/05/2011.

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರದಲ್ಲಿ ಮಾನ್ಯ ಮುಖ್ಯಮಂತ್ರಿಗಳು 2011–12ನೇ ಆಯವ್ಯಯ ಭಾಷಣದಲ್ಲಿ ಮೆಡಿಕಲ್ ಎಲೆಕ್ಟ್ರಾನಿಕ್ಸ್ ವೃತ್ತಿ ಘಟಕವನ್ನು ಪ್ರಾರಂಭಿಸುವ ಬಗ್ಗೆ ಪ್ರಸ್ತಾಪಿಸಿದ್ದು, ಪ್ರಾಯೋಗಿಕ ಹಂತವಾಗಿ ಸದರಿ ವೃತ್ತಿಯನ್ನು ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ ಹುಬ್ಬಳ್ಳಿ ಮತ್ತು ಬೆಂಗಳೂರು–29ರ ಮಹಿಳಾ ಸರ್ಕಾರಿ ಕೈಗಾರಿಕಾ ತರಬೇತಿ ಕೇಂದ್ರಗಳಲ್ಲಿ ಪ್ರಾರಂಭಿಸಲು ಯೋಜಿಸಿದ್ದು, ಸದರಿ ಸಂಸ್ಥೆಗಳಲ್ಲಿ ಮೇಲ್ಕಂಡ ವೃತ್ತಿ ಘಟಕವನ್ನು ಆರಂಭಿಸುವುದರಿಂದ ಒಟ್ಟು 84 ಹೆಚ್ಚುವರಿ ಅಭ್ಯರ್ಥಿಗಳಿಗೆ ತರಬೇತಿಯ ಅವಕಾಶವನ್ನು ಕಲ್ಪಿಸಿದಂತಾಗುತ್ತದೆ ಎಂದು ಸದರಿ ಪ್ರಸ್ತಾವನೆಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ ಸಾಮಾನ್ಯ ವೆಚ್ಚಗಳು 2230–03–101–0–01–051 ಕೈಗಾರಿಕಾ ತರಬೇತಿ ಸಂಸ್ಥೆ (ಯೋಜನೆ) ಅಡಿಯಲ್ಲಿ ಭರಿಸಲು ಉದ್ದೇಶಿಸಲಾಗಿದೆ ಎಂದು ಈ ಲೆಕ್ಕ ಶೀರ್ಷಿಕೆಯಲ್ಲಿ 2011–12 ನೇ ಸಾಲಿಗೆ ಒದಗಿಸಿರುವ ಅನುದಾನವು ಪ್ರಸ್ತುತ ಅನುಷ್ಠಾನದಲ್ಲಿರುವ ಕಾರ್ಯಕ್ರಮಗಳಿಗೆ ಸಾಲದೇ ಬರುವುದರಿಂದ, ಸದರಿ ಪ್ರಸ್ತಾವನೆ ಕುರಿತಂತೆ ರೂ. 252.60 ಲಕ್ಷಗಳು ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರುತ್ತಾ, ಸದರಿ ಸಂಸ್ಥೆಗಳಲ್ಲಿ 2 ಘಟಕಗಳ ಅನುಷ್ಠಾನಕ್ಕೆ 12 ಸಿಬ್ಬಂದಿಯವರ ಹುದ್ದೆಗಳನ್ನು ಸೃಜಿಸಲು ಕೋರುತ್ತಾ, ಹಾಲಿ ಇರುವ ನಿರ್ಬಂಧವನ್ನು ಸಡಿಲಿಸಿ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಅನುಮತಿ ನೀಡುವಂತೆಯೂ ಸಹ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 107 ಇಟಿಐ 2011, ಬೆಂಗಳೂರು, ದಿನಾಂಕ 13–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2011–12ನೇ ಸಾಲಿನಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಹುಬ್ಬಳ್ಳಿ ಮತ್ತು ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ (ಮ), ಹೊಸೂರು ರಸ್ತೆ, ಬೆಂಗಳೂರು–29 ಇಲ್ಲಿ ಮೆಡಿಕಲ್ ಎಲೆಕ್ಟ್ರಾನಿಕ್ಸ್ ವೃತ್ತಿ ಘಟಕವನ್ನು ಪ್ರಾರಂಭಿಸುವುದಕ್ಕೆ ಹಾಗೂ ಅದಕ್ಕೆ ಅಗತ್ಯವಿರುವ 4 ಕಿರಿಯ ತರಬೇತಿ ಅಧಿಕಾರಿ ಮತ್ತು 2 ಕಾರ್ಯಾಗಾರ ಸಹಾಯಕರು ಸೇರಿ ಒಟ್ಟು 6 ಹುದ್ದೆಗಳನ್ನು ಸೃಜಿಸುವುದಕ್ಕೆ ಹಾಗೂ ಅವರ್ತಕ ಮತ್ತು ಅನಾವರ್ತಕ ವೆಚ್ಚಗಳಿಗೆ ಒಟ್ಟು ರೂ. 221.236 ಲಕ್ಷ (ಎರಡು ಕೋಟಿ ಇಪ್ಪತ್ತೊಂದು ಲಕ್ಷದ ಇಪ್ಪತ್ತ್ಮೂರು ಸಾವಿರದ ಆರು ನೂರು ರೂಪಾಯಿಗಳು ಮಾತ್ರ)ಗಳ ಹೆಚ್ಚುವರಿ ಅನುದಾನವನ್ನು ಒದಗಿಸುವುದಕ್ಕೆ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಯೋಜನಾ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಪಿಡಿ 39 ಎಂ&ಇ 2011 ದಿನಾಂಕ: 18/06/2011ರ ಹಾಗೂ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 670 ವೆಚ್ಚ–9/11 ದಿನಾಂಕ: 05/01/2012ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜೆ.ಎಸ್. ವಿಶ್ವನಾಥಪ್ಪ**

ಪೀಠಾಧಿಕಾರಿ

ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

ಪಿ.ಆರ್. 364

## HORTICULTURE SECRETARIAT

**Sub :** Implementaion of Coconut Palm Insurance Scheme during 2011-12-reg.

**Read :** Govt., Order No. HCD 152 HPP 2009, dated : 19-03-2010.

**2.** CDB letter No. 1539/2011-Stat dated : 09-12-2011.

**3.** Letter of Director of Horticulture No. ತೋಇ/ತೋಬೆ/ಸತೋಅ–2/8–11–12 dated : 22-12-2011.

**Preamble:**

Coconut Development Board has informed that Government of India has extended " Coconut Palm Insurance Scheme (CPIS)" for implementation for one more year, during 2011-12 on the same terms and conditions as in the previous years. In this connection, the administrative approval and financial sanction has been sought from Department of Horticulture, Government of Karnataka. During the current year i.e., 2011-12 total outlay for Karnataka under Coconut Palm Insurance Scheme is Rs. 10.00

lakhs out of which Rs. 5.00 lakhs (50%) will be Board's contribution and Rs. 2.50 lakhs (25%) will be the State Government's share of Premium. The rest will be borne by the beneficiary farmers themselves vide CDB's letter read at (2) above.

2. The Director of Horticulture has informed that a balance amount of Rs. 11,19,258.58/- (State share Rs. 3,73,086.19 + CDB share 7,46,172.39) of the year 2010-11 has been available with Agriculture Insurance Company (AIC) vide letter read at (3) above and the same can be utilized for the year 2011-12.

3. The proposal of the Director of Horticulture has been examined and hence this Order.

**Government Order No. HCD 72 HPP 2011 Bangalore, dated 12-01-2012**

Government is pleased to accord State Level Administrative Approval for implementing the scheme namely, " Coconut Palm Insurance Scheme" during 2011-12 as per details given below;

(Rs. in lakhs)

| Phy. Target (No. of palms in lakh) | Phy. Target (in Ha) | CDB share (50 %) | State share (25%) | Farmer's share (25%) | Total outlay |
|---|---|---|---|---|---|
| 1.82 | 1399 | 5.00 | 2.50 | 2.50 | 10.00 |

2. The Operational Modalities for implementation of this scheme will be as per the Government Order read at (1) above.

3. The Agriculture Insurance Company shall utilized the Coconut Development Board share and State share already available with them and hence funds will not be released for this purpose during 2011-12.

4. Further, details of operational guidelines if require will be issued by Director of Horticulture.

5. This Order is issues with the concurrence of Internal Financial Advisor vide Note No. ತೋಇ 2 ಅಂಆಸ 2012 dated : 09-01-2012.

By Order and in the name of the Governor of Karnataka

**B.C. Prakash**

Under Secretary to Government

Horticulture Department

P.R. 365

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ರಾಮನಗರ ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ನೋಟರಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** 1) ಅಧ್ಯಕ್ಷರು, ವಕೀಲರ ಸಂಘ, ರಾಮನಗರ ಇವರ ಪತ್ರ ದಿನಾಂಕ: 29–06–2010.

2) ಸರ್ಕಾರದ ಪತ್ರ ಸಂಖ್ಯೆ: ಲಾ 226 ಎಲ್‌ಸಿಎಲ್ 2010 ದಿನಾಂಕ: 10–12–2010, 02–09–2011 ಮತ್ತು 17–11–2011.

3) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ರಾಮನಗರ ಇವರ ಪತ್ರ ಸಂಖ್ಯೆ: ಆಡಳಿತ ಶಾಖೆ/10/2010 ದಿನಾಂಕ: 13–09–2011.

**ಪ್ರಸ್ತಾವನೆ :**

ಅಧ್ಯಕ್ಷರು, ವಕೀಲರ ಸಂಘ, ರಾಮನಗರ ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 29–06–2010ರ ಪತ್ರದಲ್ಲಿ ರಾಮನಗರ ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ನೋಟರಿಗಳನ್ನು ನೇಮಕ ಮಾಡುವಂತೆ ಕೋರಿದ್ದಾರೆ. ಆ ಬಗ್ಗೆ ಪರಿಶೀಲಿಸಿ ವರದಿ ಸಲ್ಲಿಸಲು ಮೇಲೆ (2)ರಲ್ಲಿ ಓದಲಾದ ದಿನಾಂಕ: 10–12–2010. ಹಾಗೂ ತದನಂತರದ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ಜಿಲ್ಲಾಧಿಕಾರಿ, ರಾಮನಗರ ಇವರುಗಳನ್ನು ಕೋರಲಾಗಿತ್ತು.

ಅದರಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ರಾಮನಗರ ಇವರು ಮೇಲೆ (3) ರಲ್ಲಿ ಓದಲಾದ ದಿನಾಂಕ: 13–09–2011ರ ಪತ್ರದಲ್ಲಿ ರಾಮನಗರ ಕಂದಾಯ ತಾಲ್ಲೂಕಿನಲ್ಲಿ ಕೇಂದ್ರ ಸರ್ಕಾರದಿಂದ ಯಾವುದೇ ನೋಟರಿಗಳು, ನೇಮಕ ಹೊಂದಿರುವುದಿಲ್ಲ. ರಾಜ್ಯ ಸರ್ಕಾರದಿಂದ ನೇಮಕಗೊಂಡ ಇಬ್ಬರು ನೋಟರಿಗಳಿದ್ದು, ಇವರು ವರ್ಷಕ್ಕೆ ಸರಾಸರಿ 1500 ರಿಂದ 2000 ದಾಖಲಾತಿಗಳನ್ನು ನೋಟರೈಜ್ ಮಾಡಿರುತ್ತಾರೆ. 2010ರ ಅಂಕಿ ಅಂಶಗಳನ್ನು ತೆಗೆದುಕೊಂಡಲ್ಲಿ ಒಟ್ಟು 1272 ನೋಟರಿ ದಾಖಲಾತಿಗಳನ್ನು ದೃಢೀಕರಿಸಿರುತ್ತಾರೆ. ರಾಮನಗರವು ಹೊಸ ಜಿಲ್ಲೆಯಾದುದರಿಂದ ಮತ್ತು ಜಿಲ್ಲಾ ಕೇಂದ್ರದಲ್ಲಿ ಈಗಾಗಲೇ ಇರುವ 6 ನ್ಯಾಯಾಲಯಗಳ ಜೊತೆಗೆ ಹಲವಾರು ನ್ಯಾಯಾಲಯಗಳು ಸ್ಥಾಪನೆಯಾಗಿರವುದರಿಂದಲೂ ಕೇಂದ್ರ ಹಾಗೂ ರಾಜ್ಯ ಸರ್ಕಾರದ ಎಲ್ಲಾ ಕಚೇರಿಗಳು ಜಿಲ್ಲಾ ಕೇಂದ್ರದಲ್ಲಿ ಸ್ಥಾಪಿತವಾಗುತ್ತಿರುವುದರಿಂದ ಹಾಗೂ ಜಿಲ್ಲಾ ಕೇಂದ್ರದ ಜನ ಸಾಂದ್ರತೆ ಹೆಚ್ಚುವ ಸಾಧ್ಯತೆಗಳಿರುವುದರಿಂದ ಜಿಲ್ಲಾ ಕೇಂದ್ರವಾದ ರಾಮನಗರ ಕಂದಾಯ ತಾಲ್ಲೂಕಿಗೆ 5 ಹೆಚ್ಚುವರಿ ನೋಟರಿ ಹುದ್ದೆಗಳ ಅವಶ್ಯಕತೆ ಕಂಡುಬರುತ್ತದೆ ಎಂದು ಅಭಿಪ್ರಾಯ ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಲಾ 226 ಎಲ್‌ಸಿಎಲ್ 2010, ಬೆಂಗಳೂರು, ದಿನಾಂಕ 10–01–2012**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ರಾಮನಗರ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಹೆಚ್ಚುವರಿಯಾಗಿ 5 ನೋಟರಿ ಹುದ್ದೆಗಳನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಕೆ. ಲಕ್ಷ್ಮೀನರಸಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2) (ಪ್ರಭಾರ)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಪಿ.ಆರ್. 366

## INFROMATION TECHNOLOGY, BIOTECHNOLOGY AND SCIENCE TECHNOLOGY SECRETARIAT

**Sub :** Approval of the Project proposal of M/s Cornerstone Property Pvt. LTD, No. 540, 3rd Floor, CMH Road, Indira Nagar, Bangalore-560 038, To Setup An "INFO-Tech park, Hardware Park with Residential Condominiums & Common Facilities." At Different Sy Nos. of Varthur & Gunjur Villages, Varthur Hobli, Bangalore East Taluk.

**Read :** 1.Govt., Order No. ITD 08 MDA 2008 (17) Dated: 27-05-2008.

**2.** Managing Director, Karnataka Udyog Mitra's Letter No. KUM/SHLCC/DD-2/ (682-2007-08) 2011-12 Dated: 30-12-2011.

**3.** Proceedings of the 25th the SHLCC Meeting held on 14th July 2011.

**Preamble:**

Managing Director, Karnataka Udyog Mitra vide letter read at (2) above has clarified that Names of the villages for location of the project have been verified with the original application submitted by the Company to the 13th SHLCC meeting, where the project is proposed to be established is mentioned as Varthur & Gunjur and not "Thubarahalli & Siddapura villages". In the 25th SHLCC Meeting read at (3) above, it was approved to amend the Government Order read at (1) above to incorporate village names as Varthur & Gunjur in the place of Thubarahalli & Siddapur Villages. Hence Managing Director, Karnataka Udyoga Mitra, has requested to issue an amendment to the Government Order read at (1) above. Hence the following order.

**Government Order No. ITD 08 MDA 2008 (17, Bangalore Dated : 16-01-2012**

In para (3) of preamble and in the operative portion of the Government Order No. ITD 08 MDA 2008(17), dated 27-05-2008 on the above mentioned subject, the words "Thubarahalli & Siddapura Villages" shall be replaced by the read as " Varthur & Gunjur Villages".

By Order and in the name of the Governor of Karnataka

**E. Ramakrishnappa**

Under Secretary to Government

Department of Information Technology,

Biotechnology and Science Technology

P.R. 367

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಹಾಸನ ಗ್ರಾಮಾಂತರ ಜಿಲ್ಲೆ ಅರಸೀಕೆರೆ ತಾಲ್ಲೂಕು, ಅರಕಲಗೊಡು ಚನ್ನರಾಯಪಟ್ಟಣ ಹೊಳೆನರಸೀಪುರ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ: ಯೋಇ 309 ಪಿಟಿಪಿ 94, ದಿನಾಂಕ: 07–08–1995.
2) ರಾಜ್ಯ ಅಧ್ಯಕ್ಷರು ರವರ ಪತ್ರ ಸಂಖ್ಯೆ: ರಾಕಾ/ನಾನಿ/818/2011, ದಿ: 3–12–2011.
3) ರಾಜ್ಯ ಅಧ್ಯಕ್ಷರು ರವರ ಪತ್ರ ಸಂಖ್ಯೆ: ರಾಕಾ/ನಾನಿ/952/2011, ದಿ: 14–11–2011.
4) ರಾಜ್ಯ ಅಧ್ಯಕ್ಷರು ರವರ ಪತ್ರ ಸಂಖ್ಯೆ: ರಾಕಾ/ನಾನಿ/691/2011, ದಿ: 26–10–2011.
5) ರಾಜ್ಯ ಅಧ್ಯಕ್ಷರು ರವರ ಪತ್ರ ಸಂಖ್ಯೆ: ರಾಕಾ/ನಾನಿ/806/2011, ದಿ: 25–10–2011.
6) ರಾಜ್ಯ ಅಧ್ಯಕ್ಷರು ರವರ ಪತ್ರ ಸಂಖ್ಯೆ: ರಾಕಾ/ನಾನಿ/755/2011, ದಿ: 25–10–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ: 07–08–1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ / ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ಹಾಸನ ಗ್ರಾಮಾಂತರ ಜಿಲ್ಲೆ ಅರಸೀಕೆರೆ ತಾಲ್ಲೂಕು, ಅರಕಲಗೂಡು ತಾಲ್ಲೂಕು ಮತ್ತು ಚನ್ನರಾಯಪಟ್ಟಣ ಹೊಳೆನರಸೀಪುರ ತಾಲ್ಲೂಕಿನ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಅದ್ದರಿಂದ ಸರ್ಕಾರ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಯೋಇ 67 ಯೋವಿವಿ 2009, ಬೆಂಗಳೂರು, ದಿನಾಂಕ 06–01–2012**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಅನುಬಂಧ–1ರಲ್ಲಿ ನಮೂದಿಸಿರುವಂತೆ ಸದಸ್ಯರುಗಳನ್ನು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಭೀಮಾಶಂಕರ ರಾಸೂರ್**

ಸರ್ಕಾರದ ಅಧೀನ ಕಾರ್ಯದರ್ಶಿ 1& 2 (ಪ್ರ)

ಯೋಜನೆ, ಕಾರ್ಯಕ್ರಮ ಸಂಯೋಜನೆ

ಮತ್ತು ಸಾಂಖ್ಯಿಕ ಇಲಾಖೆ

ಹಾಸನ ಜಿಲ್ಲೆ:

ಹೊಳೆನರಸೀಪುರ ತಾ:

| ಕ್ರ.ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1 | ಶ್ರೀಮತಿ ಕಮಲ ಕೋಂ ಕುಮಾರ,<br>ಕೋಡಿಹಳ್ಳಿ, ದೊಡ್ಡಕುಂಚೆ ಅಂಚೆ, ಹಳೇಕೋಟೆ ಹೋಬಳಿ | ಮಹಿಳೆ |
| 2 | ಶ್ರೀ ತೀರ್ಥೇಶ್ ಬಿನ್ ಬಸವರಾಜಪ್ಪ,<br>ಹಿರೇಬೆಳಗುಲಿ ಅಂಚೆ, ಹಳೇಕೋಟೆ ಹೋಬಳಿ | ಸಾಮಾನ್ಯ |
| 3 | ಶ್ರೀ ಜಿ.ಎಸ್. ಲೋಕೇಶ್ ಬಾಬು, ಬಿನ್ ಜಿ. ಸಿದ್ದೇಗೌಡ,<br>ಗುಲಗಂಜಹಳ್ಳಿ, ಶ್ರವಣೂರು ಅಂಚೆ, ಹಳ್ಳಿಮೈಸೂರು ಹೋಬಳಿ | ಬಿ.ಸಿ.ಎಂ |
| 4 | ಶ್ರೀ ಟಿ.ಆರ್. ವಿಜಯಕುಮಾರ್ ಬಿನ್ ರುದ್ರಯ್ಯ,<br>ತೆರಣ್ಯ, ಹಳೇಕೋಟೆ ಹೋಬಳಿ | ಎಸ್.ಸಿ |
| 5 | ಶ್ರೀ ಬಿ.ಕೆ. ರಾಮಚಂದ್ರ ಮಾ: ಗ್ರಾ: ಪಂ: ಆದ್ಯಕ್ಷರು<br>ಬಿದರಕ್ಕ, ಹಳ್ಳಿಮೈಸೂರು ಹೋಬಳಿ | ಸಾಮಾನ್ಯ |
| 6 | ಶ್ರೀ ಅಹಮದ್ ಷರೀಫ್ ಬಿನ್ ಹೆಚ್.ಪಿ. ಮಹಮದ್ ಷರೀಫ್<br>ಬಸವನಗುಡಿ ಬೀದಿ, ಹೊಳೆನರಸೀಪುರ ತಾ: ಹಾಸನ ಜಿಲ್ಲೆ | ಅ.ಸಂ |

ಹಾಸನ ಜಿಲ್ಲೆ:

ಚನ್ನರಾಯಪಟ್ಟಣ ತಾ:

| ಕ್ರ.ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1 | ಶ್ರೀ ನಿಂಗೇಗೌಡ ಬಿನ್ ಬೋರೇಗೌಡ,<br>ಬೊಮ್ಮೇನಹಳ್ಳಿ, ಹಿರಿಸಾವೆ ಹೋಬಳಿ | ಸಾಮಾನ್ಯ |
| 2 | ಶ್ರೀ ಪಿ.ಎ. ನಾಗರಾಜು ಬಿನ್ ಅಮಾಸೇಗೌಡ,<br>ಪೂಮಡಿಹಳ್ಳಿ, ಜುಟ್ಟನಹಳ್ಳಿ ಅಂಚೆ, ಶ್ರವಣಬೆಳಗೊಳ ಹೋಬಳಿ | ಸಾಮಾನ್ಯ |
| 3 | ಶ್ರೀಬಿ.ಡಿ. ಲಿಂಗದೇವರು ಬಿನ್ ಬಿ.ಎಲ್ ದೊಡ್ಡವೀರಪ್ಪ ಬಿದರೆ ಬಾಗೂರು ಹೋಬಳಿ | ಹಿಂ ವರ್ಗ |
| 4 | ಶ್ರೀಮತಿ ವಿಮಲ ಕೋಂ ಶಿವಣ್ಣ,<br>ಕಾಂತರಾಜುಪುರ, ಶ್ರವಣಬೆಳಗೋಳ ಹೋಬಳಿ | ಮಹಿಳೆ |
| 5 | ಶ್ರೀ ಜಾನ್‌ರೋನಾಲ್ಡ್ ಬಿನ್ ಎಂ. ವ್ಮರಿಯಪ್ಪ,<br>ದಾಸಪುರ, ನುಗ್ಗೇಹಳ್ಳಿ ಹೋಬಳಿ | ಆ.ಸಂ. |
| 6 | ಶ್ರೀ ಎಂ.ಸಿ. ದೇವರಾಜು ಬಿನ್ ಚಿಕ್ಕಯ್ಯ<br>ಮಸಕನಹಳ್ಳಿ ಹಿರಿಸಾವೆ ಹೋಬಳಿ | ಪ.ಜಾತಿ |

ಹಾಸನ ಜಿಲ್ಲೆ:

ಹಾಸನ ಗ್ರಾಮಾಂತರ ಜಿಲ್ಲೆ, ಹಾಸನ ತಾಲ್ಲೂಕು ಕೆಡಿಪಿ ಸಮಿತಿ:

| ಕ್ರ.ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1 | ಶ್ರೀಮತಿ ಶಾಂತಮ್ಮ ಕೋ ಜನಾರ್ಧನ,<br>ದೊಡ್ಡಬಸವನಹಳ್ಳಿ ಗ್ರಾಮ ಎಂ. ಹೊಸಕೊಪ್ಪಲು ಅಂಚೆ,<br>ಕಸಬಾ ಹೋಬಳಿ | ಮಹಿಳೆ |
| 2 | ಶ್ರೀ ಗೋವಿಂದೇಗೌಡ ಬಿನ್ ದೊಡ್ಡೇಗೌಡ,<br>ಮಾವಿನಹಳ್ಳಿ, ಗ್ರಾಮ, ತೇಜೂರು ಅಂಚೆ, ಕಸಬಾ ಹೋಬಳಿ | ಸಾಮಾನ್ಯ |
| 3 | ಶ್ರೀ ಬಿ.ಕೆ. ವಿಶ್ವನಾಥ ಗೌಡ ಬಿನ್ ಬಿ.ಆರ್. ಕೃಷ್ಣೇಗೌಡ,<br>ಬಳ್ಳೀಕೆರೆ ಗ್ರಾಮ, ದುಂಡನಾಯಕನಹಳ್ಳಿ ಅಂಚೆ, ಕಟ್ಟಾಯ ಹೋಬಳಿ | ಸಾಮಾನ್ಯ |
| 4 | ಶ್ರೀ ಟಿ.ಟಿ. ರಂಗಸ್ವಾಮಿ ಬಿನ್ ತಿಮ್ಮಯ್ಯ,<br>ತಟ್ಟೆಕೆರೆ ಗ್ರಾಮ ಮತ್ತು ಅಂಚೆ, ಕಸಬಾ ಹೋಬಳಿ | ಎಸ್.ಸಿ. |
| 5 | ಶ್ರೀ ನಯೀಮುಲ್ಲಾ ಷರೀಫ್ ಬಿನ್ ದಾವೋದ್ ಷರೀಪ್, ಶಂಖ ಗ್ರಾಮ ಮತ್ತು ಅಂಚೆ,<br>ಸಾಲಗಾಮೆ ಹೋಬಳಿ | ಆ.ಸಂ. |
| 6 | ಶ್ರೀ ಪುಟ್ಟಸ್ವಾಮಿಗೌಡ ಬಿನ್ ಚಿಕ್ಕೇಗೌಡ,<br>ದೊಡ್ಡಬಾಗನಹಳ್ಳಿ ಗ್ರಾಮ ಆಗಿಲೆ ಅಂಚೆ, ಕಸಬಾ ಹೋಬಳಿ | ಬಿ.ಸಿಎಂ. |

ಹಾಸನ ಜಿಲ್ಲೆ:
ಅರಕಲಗೂಡು ತಾ:

| ಕ್ರ.ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1 | ಶ್ರೀ ಎಂ.ಎಂ. ಸುರೇಶ್ ಬಿನ್ ಲೇ: ಮಲ್ಲೇಶಪ್ಪ<br>ಕೋಟೆ, ಅರಕಲಗೂಡು ಟೌನ್, ಹಾಸನ ಜಿಲ್ಲೆ | ಸಾಮಾನ್ಯ |
| 2 | ಶ್ರೀ ಮಹೇಶ್ ಬಿನ್ ದೊಡ್ಡಸ್ವಾಮಿಗೌಡ<br>ಹಂಪಾಪುರ ಗ್ರಾಮ, ರಾಮನಾಥಪುರ ಹೋಬಳಿ | ಹಿಂ ವರ್ಗ |
| 3 | ಶ್ರೀಮತಿ ಗೀತಾ ಕೋಂ ಶೇಷಣ್ಣ,<br>ದೇವರಹಳ್ಳಿ, ಹೊನ್ನವಳ್ಳಿ, ಅಂಚೆ, | ಮಹಿಳೆ |
| 4 | ಶ್ರೀ ಮೊಹಮ್ಮದ್ ರಫೀಕ್ ಬಿನ್ ಬಾಬು<br>ಕೋಟೆ ಬೀದಿ, ಕೋಣನೂರು ಟೌನ್ | ಅ.ಸಂ. |
| 5 | ಶ್ರೀ ಪ್ರದೀಪ್ ಬಿನ್ ನಿಂಗಪ್ಪ,<br>ಕೆಸವತ್ತೂರು, ಹಂಡರಗಿ ಅಂಚೆ, ಕೊಣನೂರು ಹೋಬಳಿ | ಸಾಮಾನ್ಯ |
| 6 | ಶ್ರೀ ರತ್ನಕುಮಾರ್ ಬಿನ್ ಲೇ. ದೇವಯ್ಯ<br>ಅಂಬೇಡ್ಕರ್ ನಗರ | ಎಸ್.ಸಿ. |

ಹಾಸನ ಜಿಲ್ಲೆ:
ಅರಸೀಕೆರೆ ತಾ:

| ಕ್ರ.ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1 | ಶ್ರೀ ಪ್ರಭಾಕರ್ ಬಿನ್ ಕಲ್ಲುಮೇಳನೆಗೌಡ, ಜಾವಗಲ್ | ಹಿಂ. ವರ್ಗ |
| 2 | ಶ್ರೀ. ಎನ್.ಎಂ. ರವೀದ್ರನಾಥ್ ಬಿನ್ ಲೇ: ನಂಜಪ್ಪ,<br>ನರಸೀಪುರ, ಕಣಕಟ್ಟೆ ಹೋಬಳಿ ಕಲ್ಲುಸಾದರಹಳ್ಳಿ ಅಂಚೆ. | ಸಾಮಾನ್ಯ |
| 3 | ಶ್ರೀಮತಿ ಕಮಲಮ್ಮ ಕೋಂ ಕಂಬಯ್ಯ,<br>ಕೆ.ಪಾಳ್ಯ ಕಿತ್ತನಕೆರೆ ಕಣಕಟ್ಟೆ ಹೋಬಳಿ | ಮಹಿಳೆ |
| 4 | ಶ್ರೀ ರಾಜೇಶ್ ಬಿನ್ ಶಾಂತಪ್ಪ,]<br>ಮೈಲನಹಳ್ಳಿ, ಬೋವಿ ಕಾಲೋನಿ, ಬೆಳಗುಂಬ ಅಂಚೆ | ಎಸ್.ಸಿ |
| 5 | ಶ್ರೀ ಬಿ.ಎಲ್. ರವಿಕುಮಾರ್ ಬಿನ್ ಲಕ್ಷ್ಮಯ್ಯ<br>ಬೋರನಕೊಪ್ಪಲು, ಅಣ್ಣನಾಯ್ಕನಹಳ್ಳಿ | ಸಾಮಾನ್ಯ |
| 6 | ಶ್ರೀ. ಬಿ.ಹೆಚ್. ಸೋಹನ್‌ಲಾಲ್ ಬಿನ್ ಹೀರಾಚಂದ್,<br>ಪಾಂಡುರಂಗ ದೇವಸ್ಥಾನ ರಸ್ತೆ, ಬಾಣಾವರ | ಅ.ಸಂ. |

**ಭೀಮಾಶಂಕರ ರಾಸೂರ್**
ಸರ್ಕಾರದ ಅಧೀನ ಕಾರ್ಯದರ್ಶಿ 1& 2 (ಪ್ರ)
ಪಿ.ಆರ್. 368 ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ 2011-12ನೇ ಸಾಲಿನಲ್ಲಿ ಮೂರನೇ ಕಂತಾಗಿ ರೂ. 850.00 ಲಕ್ಷಗಳನ್ನು ಬಿಡುಗಡೆ ಮಾಡುವ ಬಗ್ಗೆ.-

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಯೋಇ 15 ಮಪ್ರಮಂ 2011, ದಿನಾಂಕ 03-10-2011

2) ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಇವರ ಪತ್ರ ಸಂಖ್ಯೆ: ಮಪ್ರಮಂ/ನಗದು/ಅನುದಾನ 2011-12/183, ದಿನಾಂಕ 05-12-2011.

**ಪ್ರಸ್ತಾವನೆ :**

2011-12ನೇ ಸಾಲಿನಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ ಲೆಕ್ಕಶೀರ್ಷಿಕೆ "2515-00-800-0-05-(ಯೋಜನೆ)" ಅಡಿಯಲ್ಲಿ ರೂ. 100.00 ಲಕ್ಷಗಳನ್ನು ಹಾಗೂ "4515-00-800-0-03" ಅಡಿಯಲ್ಲಿ ರೂ. 3300.00 ಲಕ್ಷಗಳನ್ನು ಒದಗಿಸಲಾಗಿದೆ. ಮಂಡಳಿಗೆ ಮೊದಲನೆಯ ಹಾಗೂ ಎರಡನೆಯ ಕಂತಾಗಿ ರೂ. 17.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (1)ರ ಆದೇಶದಲ್ಲಿ ಮಂಡಳಿಗೆ ಮೊದಲನೆಯ ಹಾಗೂ ಎರಡನೆಯ ಕಂತಾಗಿ ರೂ. 17.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (2)ರ ಪತ್ರದಲ್ಲಿ ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಕೋರಿರುವ ಹಿನ್ನೆಲೆಯಲ್ಲಿ ಮಂಡಳಿಗೆ ಮೂರನೆಯ ಕಂತಾಗಿ ರೂ. 850.00 ಲಕ್ಷಗಳನ್ನು ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಆದುದರಿಂದ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಯೋಇ 15 ಮಪ್ರಮಂ 2011, ಬೆಂಗಳೂರು, ದಿನಾಂಕ 16–01–2012**

2011–12ನೇ ಸಾಲಿನಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ ಆಡಳಿತ ವೆಚ್ಚಗಳಿಗಾಗಿ ಲೆಕ್ಕಶೀರ್ಷಿಕೆ "2515–00–800–0–05–101 (ಸಹಾಯಾನುದಾನ)"ಅಡಿಯಲ್ಲಿ ರೂ. 35.00 ಲಕ್ಷಗಳನ್ನು (ಮುವತ್ತೈದು ಲಕ್ಷಗಳು ಮಾತ್ರ) ಬಂಡವಾಳ ವೆಚ್ಚಗಳಿಗಾಗಿ ಲೆಕ್ಕಶೀರ್ಷಿಕೆ "4515–00–800–0–03–132" ಅಡಿಯಲ್ಲಿ ರೂ. 640.00 ಲಕ್ಷಗಳನ್ನು (ಆರುನೂರಾ ನಲವತ್ತು ಲಕ್ಷ ರೂಪಾಯಿಗಳು ಮಾತ್ರ) ವಿಶೇಷ ಘಟಕ ಯೋಜನೆಯಡಿ ಲೆಕ್ಕಶೀರ್ಷಿಕೆ "4515–00–800–0–03–422" ಅಡಿಯಲ್ಲಿ ರೂ. 125.00 ಲಕ್ಷಗಳನ್ನು (ನೂರಾ ಇಪ್ಪತ್ತೈದು ಲಕ್ಷಗಳು ಮಾತ್ರ) ಹಾಗೂ ಗಿರಿಜನ ಉಪಯೋಜನೆಯಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಲೆಕ್ಕಶೀರ್ಷಿಕೆ "4515–00–800–0–03–423" ಅಡಿಯಲ್ಲಿ ರೂ. 50.00 ಲಕ್ಷಗಳನ್ನು (ಐವತ್ತು ಲಕ್ಷಗಳು ಮಾತ್ರ) ಒಟ್ಟು ರೂ. 850.00 ಲಕ್ಷಗಳನ್ನು (ಎಂಟುನೂರ ಐವತ್ತು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲಾಗಿದೆ.

ಬಿಡುಗಡೆಯಾದ ಮೊತ್ತವನ್ನು ಮಂಡಳೀಯ ವೈಯಕ್ತಿಕ ಖಾತೆಯಲ್ಲಿ ಮೊದಲು ಇಟ್ಟು ನಂತರ ಕಾರ್ಯಕ್ರಮದ ಅನುಗುಣವಾಗಿ ಖರ್ಚು ಮಾಡತಕ್ಕದ್ದು, ನಿಯಮಾನುಸಾರ ಹಣ ಬಳಕೆ ದೃಢೀಕರಣ ಪತ್ರವನ್ನು 2011–12ರ ಸಾಲಿನಲ್ಲಿ ಮಂಡಲಿಯ ಕಾರ್ಯದರ್ಶಿಯವರು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಅದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಆಇ 215 ವೆಚ್ಚ–6/2011 ದಿನಾಂಕ 07–01–2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ನೀಡಲಾದ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಭೀಮಾಶಂಕರ ರಾಸೂರ್**
ಸರ್ಕಾರದ ಅಧೀನ ಕಾರ್ಯದರ್ಶಿ– 1 ಮತ್ತು 2 (ಪ್ರ.)
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

ಪಿ.ಆರ್. 369

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಗುಲ್ಬರ್ಗಾ ಜಿಲ್ಲೆ ಜಿಲ್ಲಾಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಯೋಇ 309 ಪಿಟಿಪಿ 94, ದಿನಾಂಕ 07–08–1995

2) ಭಾರತೀಯ ಜನತಾ ಪಾರ್ಟಿಯ ರಾಜಾಧ್ಯಕ್ಷರ ಪತ್ರ ಸಂ. ರಾಕಾ/ನಾನಿ/448 2011, ದಿನಾಂಕ 22–09–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ 07–08–1995ರ ಸರ್ಕಾರಿ ಅದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ಗುಲ್ಬರ್ಗಾ ಜಿಲ್ಲೆ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 70 ಯೋವಿವಿ 2009, ಬೆಂಗಳೂರು, ದಿನಾಂಕ 16–01–2012**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು–ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡ ಐದು ಜನರನ್ನು ಗುಲ್ಬರ್ಗಾ ಜಿಲ್ಲೆ ಜಿಲ್ಲಾಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

**ಗುಲ್ಬರ್ಗಾ ಜಿಲ್ಲೆ:**

| ಕ್ರ.ಸಂ. | ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ವರ್ಗ |
|---|---|---|
| 1 | ಶ್ರೀ ಸಿದ್ಧರಾಮಪ್ಪ, ಮುಕ್ಕಾಂ ಪೋಸ್ಟ್, ಸಣ್ಣೂರು ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ | ಹಿಂ.ವ. |
| 2 | ಶ್ರೀ ಭೀಮರಾವ್, ಮುಕ್ಕಾಂ ಪೋಸ್ಟ್ ಯಾತನೂರ್, ತಾಲ್ಲೂಕು ಜೇವರ್ಗಿ, ಜಿಲ್ಲೆ ಗುಲ್ಬರ್ಗಾ | ಎಸ್.ಸಿ. |
| 3 | ಶ್ರೀ ನಾಗೇಂದ್ರಪ್ಪ ಸಾಹುಕಾರ್, ಮುಕ್ಕಾಂ ದುಗನೂರ್, ತಾಲ್ಲೂಕು ಸೇಡಂ, ಜಿಲ್ಲಾ ಗುಲ್ಬರ್ಗಾ | ಸಾಮಾನ್ಯ |
| 4 | ಶ್ರೀಮತಿ ಶಕುಂತಲ ಆಚಾರ್ಯ ಕೋಂ ಕೃಷ್ಣಮಚಾರ್ಯ, ಹೌ.ನಂ.–1–949/23/46/ಎ, ಗಾಬೇರಿ ಲೇಔಟ್, ಹಳೇ ಜೇವರ್ಗಿ ರೋಡ್, ಜಿಲ್ಲೆ ಗುಲ್ಬರ್ಗಾ | ಮಹಿಳೆ |
| 5 | ಖಾಜ ಹುಸೇನ್, ಮುಕ್ಕಾಂ ಅತನೂರ್, ತಾಲ್ಲೂಕು ಅಫಜಲ್‌ಪುರ, ಜಿಲ್ಲೆ ಗುಲ್ಬರ್ಗಾ | ಅ.ಸಂ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಭೀಮಾಶಂಕರ ರಾಸೂರ್**
ಸರ್ಕಾರದ ಅಧೀನ ಕಾರ್ಯದರ್ಶಿ– 1 ಮತ್ತು 2 (ಪ್ರ.)
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

ಪಿ.ಆರ್. 370

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಶ್ರೀ ಬಿ. ಸುಂಕಪ್ಪ, ಕಾರ್ಯದರ್ಶಿಗಳು ಹಾಗೂ ಪ್ರಭಾರಿ ಆಯುಕ್ತರು, ನಗರಭಿವೃದ್ಧಿ ಪ್ರಾಧಿಕಾರ ರಾಯಚೂರು ಶ್ರೀ ಎಂ. ಮುನಿರುದ್ದೀನ್, ಡ್ರಾಫ್ಟ್ಸ್‌ಮನ್, ಶ್ರೀ ನರಸಿಂಹಲು, ದ್ವಿ.ದ.ಸ. ಇವರುಗಳ ವಿರುದ್ಧ ದಾಖಲಾದ ಟ್ರಾಪ್ ಪ್ರಕರಣದ ಇಲಾಖಾ ವಿಚಾರಣೆ ಮಂಜೂರಾತಿ ಕುರಿತು.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ನಅಇ 23, ಗುಅಪ್ರಾ 2010, ದಿನಾಂಕ 05–04–2010
2) ಸರ್ಕಾರದ ಆದೇಶ ಸಂಖ್ಯೆ: ನಅಇ 23, ಗುಅಪ್ರಾ 2010, ದಿನಾಂಕ 30–09–2010
3) ಸರ್ಕಾರದ ಆದೇಶ ಸಂಖ್ಯೆ: ನಅಇ 23, ಗುಅಪ್ರಾ 2010, ದಿನಾಂಕ 28–04–2011
4) ಸರ್ಕಾರದ ಆದೇಶ ಸಂಖ್ಯೆ: ನಅಇ 23, ಗುಅಪ್ರಾ 2010, ದಿನಾಂಕ 21–05–2011
5) ಸರ್ಕಾರದ ತಿದ್ದುಪಡಿ ಅದೇಶ ಸಂಖ್ಯೆ: ನಅಇ 23 ಗುಅಪ್ರಾ 2010, ದಿನಾಂಕ 20–09–2011.
6) ಉಪ ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ: ಕಂಪ್ಲೇಂಟ್/ಉಪಲೋಕ್/ಜಿಎಲ್‌ಬಿ–195/2011/ಎಆರ್‌ಇ–6, ದಿನಾಂಕ 04–11–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಬೆಂಗಳೂರುರವರು, ಶ್ರೀ ಮೊಹಮದ್ ನಯೀಮ್ ಅಶರಫ್ ಬಿನ್ ಅಬ್ದುಲ್ ಶುಕೂರ್‌ಸಾಬ್, ರಾಯಚೂರು ಇವರು ಯಕ್ಲಾಸ್ಪೂರ ಗ್ರಾಮದಲ್ಲಿ ಖರೀದಿಸಿದ ಜಮೀನಿನಲ್ಲಿ ವಸತಿ ಉದ್ದೇಶಕ್ಕಾಗಿ ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರದವರಿಂದ ಶೇ. 40% ರಷ್ಟು ನಿವೇಶನಗಳ ಅಂತಿಮ ಅನುಮೋದನೆ ಆದೇಶ ಪಡೆಯಲು ಪ್ರಸ್ತಾಪಿತ ಪ್ರಾಧಿಕಾರದ ಆಯುಕ್ತರಾದ ಶ್ರೀ ಸುಂಕಪ್ಪ, ಶ್ರೀ ಎಂ. ಮುನೀರುದ್ದಿನ್, ಡ್ರಾಫ್ಟ್ಸ್‌ಮೆನ್ ಹಾಗೂ ಶ್ರೀ ನರಸಿಂಹಲು, ದ್ವಿ.ದ.ಸ., ಇವರುಗಳು ಲಂಚಕ್ಕಾಗಿ ಒತ್ತಾಯಿಸಿರುವುದಾಗಿ ತಿಳಿಸಿ, ಲೋಕಾಯುಕ್ತ ಕಛೇರಿಗೆ ನೀಡಿದ ದೂರಿನ ಮೇರೆಗೆ, ಲೋಕಾಯುಕ್ತ, ಪೊಲೀಸರು ದಿನಾಂಕ 21–1–2010ರಂದು ಬೀಸಿದ ಬಲೆಗೆ ಸಿಕ್ಕಿಬಿದ್ದ ಪ್ರಯುಕ್ತ ಕರ್ನಾಟಕ ಸಿವಿಲ್ ಸೇವೆಗಳು (ಸಿ.ಸಿ.ಎ) ನಿಯಮಾವಳಿ 1957 ನಿಯಮ 10 (ಎ)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರಿವಿಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿತ್ತು.

ಸದರಿ ನೌಕರರ ಪೈಕಿ ಶ್ರೀ ಬಿ. ಸುಂಕಪ್ಪ ಮತ್ತು ಶ್ರೀ ಮುನ್ನೀರುದ್ದೀನ್ ರವರುಗಳು ಕೆ.ಎ.ಟಿ. ಅರ್ಜಿ ಸಂಖ್ಯೆ: 2492 ಮತ್ತು 2493ರ ಆದೇಶದಲ್ಲಿ ದಿನಾಂಕ 5–4–2010ರ ಅಮಾನತ್ತು ರದ್ದುಗೊಳಿಸಿದ ಹಿನ್ನೆಲೆಯಲ್ಲಿ ಕರ್ನಾಟಕ ಸಿವಿಲ್ ಸೇವೆಗಳು (ಸಿ.ಸಿ.ಎ) ನಿಯಮಾವಳಿ 1957 ನಿಯಮ 10(5)(ಸಿ) ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇವರನ್ನು ಸೇವೆಗೆ ಪುನಃ ಸ್ಥಾಪಿಸಿ ಕ್ರಮವಾಗಿ ಕೊಪ್ಪಳ ಮತ್ತು ಬೆಳಗಾವಿ ನಗರಾಭಿವೃದ್ಧಿ ಪ್ರಾಧಿಕಾರಗಳಲ್ಲಿ ಪುನಸ್ಥಿತಿಗೊಳಿಸಿ ಮೇಲೆ ಓದಲಾದ ಕ್ರಮಾಂಕ (2)ರ ಆದೇಶದಲ್ಲಿ ಆದೇಶಿಸಲಾಯಿತು. ನಂತರ ಮೇಲೆ ಓದಲಾದ ಕ್ರಮಾಂಕ(3)ರ ಆದೇಶದಲ್ಲಿ ಶ್ರೀ ನರಸಿಂಹಲು, ದ್ವಿ.ದ.ಸ. ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ ನಗರ ಯೋಜನಾ ಪ್ರಾಧಿಕಾರ ಮಾನ್ವಿ ಇಲ್ಲಿ ಖಾಲಿ ಇರುವ ಹುದ್ದೆಗೆ ಪುನಃಸ್ಥಿತಿಗೊಳಿಸಿ ಆದೇಶಿಸಲಾಯಿತು.

ಉಪ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಕೋರಿಕೆ ಮೇರೆಗೆ ಮೇಲೆ ಓದಲಾದ ಕ್ರಮಾಂಕ (4)ರ ಆದೇಶದಲ್ಲಿ ಶ್ರೀ ಬಿ. ಸುಂಕಪ್ಪ ಇವರು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಶಿಕ್ಷಾರ್ಹವಾದ ಅಪರಾಧಕ್ಕಾಗಿ ಸದರಿ ಕಾಯ್ದೆಯ ಕಲಂ 19(1)(ಬಿ) ರನ್ವಯ ಇವರನ್ನು ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡಲಾಗಿದೆ (ಮೇಲೆ ಓದಲಾದ ಕ್ರಮಾಂಕ (5)ರಲ್ಲಿನ ತಿದ್ದುಪಡಿ ಆದೇಶದಲ್ಲಿ "ಹುದ್ದೆಯಿಂದ ತೆಗೆದುಹಾಕುವ (ವಜಾ ಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ" ಎಂದು ತಿದ್ದುಪಡಿ ಆದೇಶ ಹೊರಡಿಸಿದೆ)

ಪ್ರಸ್ತುತ ಮೇಲೆ ಓದಲಾದ ಕ್ರಮಾಂಕ (6)ರ ಪತ್ರದಲ್ಲಿ ಅಪರ ನಿಬಂಧಕರು ವಿಚಾರಣೆಗಳು–6, ಕರ್ನಾಟಕ ಲೋಕಾಯುಕ್ತ ರವರು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984 ಕಲಂ 12(3)ರಡಿಯಲಿ ಮಾನ್ಯ ಉಪಲೋಕಾಯುಕ್ತರು ಕರ್ನಾಟಕ ರಾಜ್ಯ, ಬೆಂಗಳೂರು ರವರು ಶ್ರೀ ಬಿ. ಸುಂಕಪ್ಪ, ಈ ಹಿಂದಿನ ಪ್ರಭಾರಿ ಆಯುಕ್ತರು, ಶ್ರೀ ಎಂ. ಮುನಿರುದ್ದೀನ್, ಡ್ರಾಫ್ಟ್ಸ್‌ಮನ್ ಮತ್ತು ಶ್ರೀ ನರಸಿಂಹಲು, ದ್ವಿ.ದ.ಸ. ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರ ಇವರುಗಳ ವಿರುದ್ಧದ ಪ್ರಕರಣಕ್ಕೆ ಸಂಬಂಧಿಸಿದಂತೆ ಈಗಾಗಲೇ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲು ಕಾರಣ ಕೇಳಿ ನೋಟೀಸ್ ಜಾರಿಮಾಡಿದ್ದು, ಸದರಿ ನೋಟೀಸಿಗೆ ಪ್ರತಿವಾದಿಗಳು ಸಲ್ಲಿಸಿರುವ ಉತ್ತರಗಳು ಸಮಂಜಸವಾಗಿಲ್ಲವೆಂದು ಹಾಗೂ ಮೇಲಿನ 3 ಜನ ಅಪರಾಧಿಗಳು ಕೆ.ಸಿ.ಎಸ್. (ನಡತೆ) ನಿಯಮ 1966ರ ನಿಯಮ 3(1)ರಂತೆ ತಪ್ಪು ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆಂದು ದಾಖಲೆಗಳು ಮತ್ತು ಸಾಕ್ಷಿ ಪುರಾವೆಗಳು ರುಜುವಾತು ಪಡಿಸುತ್ತಿರುವುದರಿಂದ ಕರ್ನಾಟಕ ಲೋಕಾಯುಕ್ತ ಕಾಯ್ದೆ 1984 ಕಲಂ 12(3)ರನ್ವಯ ಮೇಲೆ ತಿಳಿಸಿದ 3 ಜನ ಅಪರಾಧಿಗಳ ಮೇಲೆ ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿ (ಸಿಸಿಎ) ನಿಯಮ 1957 ನಿಯಮ 14(ಎ)ರಂತೆ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ಲೋಕಾಯುಕ್ತಕ್ಕೆ ವಹಿಸಬೇಕೆಂದು ಕೋರಿರುತ್ತಾರೆ.

ಅದರಂತೆ ಸರ್ಕಾರವು ಶ್ರೀ ಬಿ. ಸುಂಕಪ್ಪ, ಕಾರ್ಯದರ್ಶಿ, ಈ ಹಿಂದಿನ ಪ್ರಭಾರ ಆಯುಕ್ತರು, ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರ, ಪ್ರಸ್ತುತ ಆಯುಕ್ತರು, ಕೊಪ್ಪಳ ನಗರಾಭಿವೃದ್ಧಿ ಪ್ರಾಧಿಕಾರ, ಶ್ರೀ ಮುನಿರುದ್ದೀನ್, ಡ್ರಾಫ್ಟ್ಸ್‌ಮೆನ್, ಪ್ರಸ್ತುತ ಬೆಳಗಾಂ ನಗರಾಭಿವೃದ್ಧಿ ಪ್ರಾಧಿಕಾರ ಮತ್ತು ಶ್ರೀ ನರಸಿಂಹಲು, ದ್ವಿ.ದ.ಸ. ಪ್ರಸ್ತುತ ಮಾನ್ವಿ ನಗರ ಯೋಜನಾ ಪ್ರಾಧಿಕಾರ ಇವರುಗಳು ಮೇಲೆ ಇಲಾಖಾ ವಿಚಾರಣೆಯನ್ನು ಮಾನ್ಯ ಉಪ–ಲೋಕಾಯುಕ್ತರು, ಕರ್ನಾಟಕ ರಾಜ್ಯ, ಬೆಂಗಳೂರು ಇವರಿಗೆ ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿ (ಸಿಸಿಎ) ನಿಯಮ 1957 ನಿಯಮ 14(ಎ)ರಂತೆ ವಹಿಸಲು ಮಂಜೂರಾತಿ ನೀಡಲು ಸರ್ಕಾರವು ತೀರ್ಮಾನಿಸಿರುತ್ತದೆ. ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ನಅಇ 23 ಗುಅಪ್ರಾ 2010, ಬೆಂಗಳೂರು, ದಿನಾಂಕ 12–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಈ ಕೆಳಕಂಡ ಅಧಿಕಾರಿಗಳು/ನೌಕರರಾದ:–

1) ಶ್ರೀ ಬಿ. ಸುಂಕಪ್ಪ, ಕಾರ್ಯದರ್ಶಿಗಳು ಹಾಗೂ ಈ ಹಿಂದಿನ ಪ್ರಭಾರಿ ಆಯುಕ್ತರು, ಪ್ರಸ್ತುತ ಆಯುಕ್ತರು ನಗರಾಭಿವೃದ್ಧಿ ಪ್ರಾಧಿಕಾರ, ಕೊಪ್ಪಳ.

2) ಶ್ರೀ ಮುನಿರುದ್ದೀನ್, ಡ್ರಾಫ್ಟ್ಸ್‌ಮೆನ್, ಪ್ರಸ್ತುತ ಬೆಳಗಾವಿ ನಗರಾಭಿವೃದ್ಧಿ ಪ್ರಾಧಿಕಾರ, ಬೆಳಗಾವಿ

3) ಶ್ರೀ ನರಸಿಂಹಲು, ದ್ವಿ.ದ.ಸ. ಪ್ರಸ್ತುತ ಮಾನ್ವಿ ನಗರ ಯೋಜನಾ ಪ್ರಾಧಿಕಾರ, ಮಾನ್ವಿ

ಇವರುಗಳ ವಿರುದ್ಧದ ಆರೋಪಗಳ ಬಗ್ಗೆ ಗುರುತರ ದಂಡನೆ (Major Penalty) ವಿಧಿಸುವ ಕ್ರಮವನ್ನು ಅನುಸರಿಸಿ ಇಲಾಖಾ ವಿಚಾರಣೆ ನಡೆಸಲು 1957ರ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿಗಳ ನಿಯಮ 14(ಎ) ರನ್ವಯ ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 372 ನಗರಾಭಿವೃದ್ಧಿ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಅರಸೀಕೆರೆ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ರೂ. 8000.00 ಲಕ್ಷಗಳಿಗೆ ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.–

**ಓದಲಾಗಿದೆ :** ವ್ಯ.ನಿ., ಕನನೀಸಒಚಮಂಡಳಿರವರ ಪತ್ರ ಸಂಖ್ಯೆ: ಕಜಮಂ/ತಾಂತ್ರಿಕ/ಅರಸೀಕೆರೆ–ಒ.ಚ.ಯೋ/1894/2011–12, ದಿನಾಂಕ 17–09–2011.

**ಪ್ರಸ್ತಾವನೆ :**

ಅರಸೀಕೆರೆ ಪಟ್ಟಣವು ಹಾಸನ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, 2001ರ ಜನಗಣತಿಯಂತೆ ಪಟ್ಟಣದ ಜನಸಂಖ್ಯೆಯು 45,166 ಇದ್ದು ಪ್ರಸ್ತುತ ಜನಸಂಖ್ಯೆ 50,000 ಇರುತ್ತದೆ. ಈ ಪಟ್ಟಣಕ್ಕೆ 1998ರಲ್ಲಿ ಚಾಲನೆಗೊಂಡ ತಿಪಟೂರು ಮತ್ತು ಅರಿಸೀಕೆರೆ ಸಂಯೋಜಿತ ನೀರು ಸರಬರಾಜು ಯೋಜನೆ ಮಾಡಲಾಗುತ್ತಿದ್ದು 2021ನೇ ಸಾಲಿನಲ್ಲಿ ಅಂದಾಜಿಸಲಾದ 55,000 ಜನಸಂಖ್ಯೆಗೆ ತಲಾ ದಿನಂಪ್ರತಿ 135 ಲೀಟರ್ ನಂತೆ ನೀರು ಸರಬರಾಜುಮಾಡಲು ವಿನ್ಯಾಸಿಸಿ, ಚಾಲ್ತಿಗೊಳಿಸಲಾಗಿತ್ತು. ಹಾಲಿ ಇಚನೂರು ಕೆರೆ ಸಾಮರ್ಥ್ಯವು 2 ಪಟ್ಟಣಗಳಿಗೆ ಬೇಕಾಗುವ ನೀರು ಪೂರೈಸಲು ಸಾಧ್ಯವಾಗುತ್ತಿಲ್ಲದ ಕಾರಣ ಶೇ. 40 ರಷ್ಟು ಜನಸಂಖ್ಯೆಯು ಕೊಳವೆ ಬಾವಿಗಳನ್ನು ಅವಲಂಬಿಸಿರುತ್ತಾರೆ. ಕೊಳವೆ ಬಾವಿಗಳಲ್ಲಿ ಪ್ಲೋರೈಡ್ ಅಂಶ ಹೆಚ್ಚಿದ್ದು, ಈ ಕೊರತೆಯನ್ನು ನೀಗಿಸಲು ಹೇಮಾವತಿ ನದಿಯಿಂದ ಶಾಶ್ವತ ನೀರು ಸರಬರಾಜು ಮಾಡಲು ರೂ. 12,185.00 ಲಕ್ಷಗಳ ವೆಚ್ಚದಲ್ಲಿ ಯೋಜನೆಯನ್ನು ರೂಪಿಸಿ ಸದರಿ ಯೋಜನೆಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಪಟ್ಟಣಕ್ಕೆ 1980ನೇ ಸಾಲಿನಲ್ಲಿ ಒಳಚರಂಡಿ ವ್ಯವಸ್ಥೆ ಒದಗಿಸಿದ್ದು, ಈ ಯೋಜನೆಯಲ್ಲಿನ ಗ್ರಾಮಸಾರ ಕೊಳವೆ ಮಾರ್ಗ ಜಾಲವು ಬಹಳ ಹಳೆಯದಾಗಿದ್ದು, ಸರಿಯಾಗಿ ಕಾರ್ಯ ನಿರ್ವಹಿಸುತ್ತಿಲ್ಲ. ಆದ್ದರಿಂದ, ಹೊಸ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸುವುದು ಅವಶ್ಯವಾಗಿರುತ್ತದೆ. ಅದರಂತೆ, ಯೋಜನೆಯನ್ನು 2012ನೇ ಸಾಲಿನಲ್ಲಿ ಅಂದಾಜಿಸಲಾದ 50,000 ಜನಸಂಖ್ಯೆಗೆ ಪರಿಗಣಿಸಿ, 2027ರ ಮಧ್ಯಂತರ ಅವಧಿಗೆ 80,000 ಹಾಗೂ ಅಂತಿಮ ಅವಧಿಯಾದ 2042ರಲ್ಲಿ ಅಂದಾಜಿಸಲಾದ 1,06,050 ಜನಸಂಖ್ಯೆಯನ್ನು ಪರಿಗಣಿಸಿ ವಿನ್ಯಾಸಿಸಲಾಗಿದೆ.

ಪ್ರಸ್ತುತ ಸರ್ಕಾರವು ಹಾಲಿ ಜಾರಿಯಲ್ಲಿರುವ ಒಳಚರಂಡಿ ಯೋಜನೆಗಳ ಆರ್ಥಿಕ ಮಾದರಿಯು ಸರ್ಕಾರದ ಸಾಲದಿಂದ ಮತ್ತು ಹಣಕಾಸು ಸಂಸ್ಥೆಗಳಿಂದ ಸಾಲ ಹಾಗೂ ಸ್ಥಳೀಯ ಸಂಸ್ಥೆಗಳ ವಂತಿಕೆಯಿಂದ ಯೋಜನೆಯ ಅಂದಾಜನ್ನು ಭರಿಸಲಾಗುತ್ತಿದ್ದು ಸದರಿ ಸ್ಥಳೀಯ ಸಂಸ್ಥೆಗಳಲ್ಲಿ ವಾಸಿಸುತ್ತಿರುವ ನಾಗರೀಕರ ಹಿತದೃಷ್ಟಿಯಿಂದ, ಪರಿಸರ ಸಂರಕ್ಷಣೆ ಹಿತದಲ್ಲಿ ಮತ್ತು ಮಲೀನ ನೀರು ನದಿಗಳನ್ನು/ಅಂತರ್ಜಲ ನೀರನ್ನು ಕುಲಷಿತಗೊಳಿಸದಿರುವ ದೃಷ್ಟಿಯಿಂದ ಎಲ್ಲಾ ಸ್ಥಳೀಯ ಸಂಸ್ಥೆಗಳಲ್ಲಿ ಒಳಚರಂಡಿ ಯೋಜನೆಗಳನ್ನು ಕಲ್ಪಿಸುವ ದೃಷ್ಟಿಯಿಂದ ಮತ್ತು ಸ್ಥಳೀಯ ಸಂಸ್ಥೆಗಳು ಆರ್ಥಿಕವಾಗಿ ಸಬಲವಲ್ಲದ ಕಾರಣ ಈ ಯೋಜನೆಗಳ ಪ್ರಯೋಜನವನ್ನು ಪಡೆಯುವುದರಿಂದ ವಂಚಿತರಾಗುವುದನ್ನು ತಡೆಯಲು ಸರ್ಕಾರವು, ಒಳಚರಂಡಿ ಯೋಜನೆಯ ಆರ್ಥಿಕ ಮಾದರಿಯನ್ನು ಸರ್ಕಾರದ ಅನುದಾನದಿಂದ ಭರಿಸುವ ಉದ್ದೇಶ ಹೊಂದಿ ಸದರಿ ಯೋಜನೆಗಳ ಆರ್ಥಿಕ ಮಾದರಿಯನ್ನು ಆದೇಶ ಸಂಖ್ಯೆ: ನಅಇ 07 ಯುಡಬ್ಲ್ಯೂಎಸ್ 2011, ದಿನಾಂಕ 20–07–2011 ರಿಂದ ಜಾರಿಗೆ ಬರುವಂತೆ ಪರಿಷ್ಕರಿಸಿ ಆದೇಶಿಸಿರುತ್ತದೆ. ಅದರಂತೆ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ರವರು ಈ ಯೋಜನೆಯ ಆರ್ಥಿಕ ಮಾದರಿಯನ್ನು ಈ ಕೆಳಕಂಡಂತೆ ನಿಗದಿಗೊಳಿಸಿ ಪ್ರಸ್ತಾವನೆಯನ್ನು ಸರ್ಕಾರದ ಆಡಳಿತಾತ್ಮಕ ಅನುಮೋದನೆ ಕೋರಿ ಸಲ್ಲಿಸಿರುತ್ತಾರೆ.

| | |
|---|---|
| ಕರ್ನಾಟಕ ಸರ್ಕಾರದ ಅನುದಾನ (75%) | ರೂ. 6000.00 ಲಕ್ಷಗಳು |
| ಆರ್ಥಿಕ ಸಂಸ್ಥೆಗಳಿಂದ ಸಾಲ (20%) | ರೂ. 1600.00 ಲಕ್ಷಗಳು |
| ಅರಸೀಕೆರೆ ಪುರಸಭೆ ವಂತಿಕೆ (05%) | ರೂ. 400.00 ಲಕ್ಷಗಳು |
| ಒಟ್ಟು | ರೂ. 8000.00 ಲಕ್ಷಗಳು |

ಈ ಯೋಜನೆಯನ್ನು ಮಂಡಳಿಯ 2011–12ನೇ ಸಾಲಿನ ಅನುಮೋದಿತ ಕ್ರಿಯಾಯೋಜನೆಯಲ್ಲಿ ಸೇರಿಸಿ ಪ್ರಸ್ತುತ ಸಾಲಿನಲ್ಲಿ ರೂ. 2667.00 ಲಕ್ಷಗಳನ್ನು ಅನುವು ಮಾಡಲಾಗಿದೆ.

ಸರ್ಕಾರವು ಯೋಜನೆಯ ಅಂದಾಜಿನಲ್ಲಿ ವಿಧಿಸಲಾಗುತ್ತಿರುವ ಇಟಿಪಿ, ದರಗಳನ್ನು ಶೇಕಡ 5ಕ್ಕೆ ಮಿತಿಗೊಳಿಸಲು ನಿರ್ಧರಿಸುವ ಹಿನ್ನೆಲೆಯಲ್ಲಿ ಹಾಗೂ ಯೋಜನೆಯಡಿ ಉದ್ಭವಿಸಬಹುದಾದ ಟೆಂಡರ್ ಪ್ರೀಮಿಯಮ್ ಮತ್ತು ಎಸ್ಕಲೇಶನ್ ದರಗಳನ್ನು ಸ್ಥಳೀಯ ಸಂಸ್ಥೆಯೇ ಬರಿಸಬೇಕಾಗಿರುವುದರಿಂದ ಸದರಿ ಮೊತ್ತಗಳನ್ನು ಅಂದಾಜು ಪಟ್ಟಿಯಿಂದ ಹೊರತು ಪಡಿಸಲು ತೀರ್ಮಾನಿಸಿದೆ. ಅದರಂತೆ ಯೋಜನೆಯ ಅಂದಾಜು ವೆಚ್ಚದಲ್ಲಿ ಮೂಲ ಅಂದಾಜು ಮೊತ್ತವಾದ ರೂ. 5999.65 ಲಕ್ಷಗಳಿಗೆ ಶೇಕಡ 5 ರಷ್ಟು ಇಟಿಪಿ ದರಗಳನ್ನು ಅಂದರೆ ರೂ. 299.98 ಲಕ್ಷಗಳು ಮತ್ತು ಇತರೆ ಠೇವಣಿ ರೂ. 115.00 ಲಕ್ಷಗಳನ್ನು ಹಾಗೂ ಇತರೆ ವೆಚ್ಚಗಳಾದ ರೂ. 0.37 ಲಕ್ಷಗಳನ್ನು ಸೇರಿಸಿ ಯೋಜನೆಯ ಅಂದಾಜು ಮೊತ್ತವನ್ನು ರೂ. 6415.00 ಲಕ್ಷಗಳಿಗೆ ಮಿತಿಗೊಳಿಸಬೇಕಾಗಿದೆ.

ಸರ್ಕಾರವು ಮಂಡಳಿಯ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 17 ಯುಡಿಎಸ್ 2011, ಬೆಂಗಳೂರು, ದಿನಾಂಕ 17–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಅರಸೀಕೆರೆ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 6415.00 ಲಕ್ಷಗಳಲ್ಲಿ (ರೂ. ಆರು ಸಾವಿರದ ನಾಲ್ಕುನೂರ ಹದಿನೈದು ಲಕ್ಷಗಳು ಮಾತ್ರ) ಕಲ್ಪಿಸುವ ಯೋಜನೆಗೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1) The Escalation charges should not form part of the estimate. It should be borne by the concerned ULB. The estimate is reduced to such extent.
2) ETP/Contingencies are limited to 5 % of the project cost
3) The board shall invite the tender immediately after the handing over of the land required under the scheme in order to avoid time and cost run over.
4) The consent of the ULB shall be obtained to meet the extra cost that might occur due to deviations, extra item works or variations in the scheme.
5) Adequate provision to be made by the Board in the following years for timely completion of the Project.
6) Water rates as proposed by KUWS & DB have to be implemented to meet O & M cost of UGD.
7) KTPP provisions, quality control and timely completion should be ensured
8) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ

ಈ ಅದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 555 Exp-9/2011, ದಿನಾಂಕ 02–11–2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ. ಎಂ. ವಾಸುದೇವರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

ಪಿ.ಆರ್. 373

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ದೇವದುರ್ಗ ಪಟ್ಟಣಕ್ಕೆ ಕೃಷ್ಣಾ ನದಿ ಮೂಲದಿಂದ ಹೆಚ್ಚುವರಿ ನೀರು ಸರಬರಾಜು ಯೋಜನೆಯನ್ನು ಅಂದಾಜು ರೂ. 4650–00 ಲಕ್ಷಗಳಲ್ಲಿ ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.–

**ಓದಲಾಗಿದೆ :** ವ್ಯ.ನಿ., ಕನನೀಸಒಚಮಂಡಳಿರವರ ಪತ್ರ ಸಂಖ್ಯೆ: ವ್ಯನಿ/ಉಮುಅ(ಎಂ)/ದೇವದುರ್ಗ/ 3619/2009–10, ದಿನಾಂಕ 18–03–2010.

**ಪ್ರಸ್ತಾವನೆ :**

ದೇವದುರ್ಗ ಪಟ್ಟಣವು ರಾಯಚೂರು ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು ಈ ಪಟ್ಟಣದ ಜನಸಂಖ್ಯೆಯು 2001ರ ಜನಗಣತಿಯ ಪ್ರಕಾರ 21994, ಇದ್ದು ಹಾಲಿ 40,000/– ಇರುತ್ತದೆ. ಈ ಪಟ್ಟಣಕ್ಕೆ ನೀರು ಸರಬರಾಜು ಯೋಜನೆಯ್ನು 2003ರಲ್ಲಿ ರೂ. 289.50 ಲಕ್ಷಗಳ ಅಂದಾಜಿನಲ್ಲಿ 2030ರಲ್ಲಿ ನಿರೀಕ್ಷಿಸಿದ 30,000 ಜನಸಂಖ್ಯೆಗೆ ಸುಮಾರು 70 ಎಲ್‌ಪಿಸಿಡಿ ನೀರನ್ನು ಸರಬರಾಜು ಮಾಡಲು ವಿನ್ಯಾಸಗೊಳಿಸಿ ಅನುಷ್ಠಾನಗೊಳಿಸಲಾಯಿತು ದೇವದುರ್ಗ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸುವ ಯೋಜನೆಯನ್ನು ರೂ. 720.00 ಲಕ್ಷಗಳ ಅಂದಾಜಿನಲ್ಲಿ ಕೈಗೆತ್ತಿಕೊಳ್ಳಲು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಸದರಿ ಕಾಮಗಾರಿಗಳು ಪ್ರಗತಿಯಲ್ಲಿವೆ. ಪಟ್ಟಣದ ಒಳಚರಂಡಿ ಯೋಜನೆಯನ್ನು ತಲಾ ದಿನಂಪ್ರತಿ 135 ಎಲ್‌ಪಿಸಿಡಿ ನೀರು ಸರಬರಾಜು ಪರಿಗಣಿಸಿ, ವಿನ್ಯಾಸಗೊಳಿಸಲಾಗಿರುತ್ತದೆ.

ಇತ್ತೀಚಿನ ವರ್ಷಗಳಲ್ಲಿ ದೇವದುರ್ಗ ಪಟ್ಟಣವು ತೀವ್ರ ಬೆಳವಣಿಗೆ ಹೊಂದುತ್ತಿದ್ದು, ಹಾಲಿ ಜನಸಂಖ್ಯೆಗೆ ಬೇಸಿಗೆ ತಿಂಗಳಲ್ಲಿ ನೀರು ಸರಬರಾಜು ಮಾಡಲು ವ್ಯತ್ಯಯ ಉಂಟಾಗುತ್ತಿದೆ. ಸದರಿ ಪಟ್ಟಣದ ವ್ಯಾಪ್ತಿಗೆ ಬರುವ ಸುತ್ತಮುತ್ತಲಿನ ಹಳ್ಳಿಗಳಿಗೆ ಮತ್ತು ತಾಂಡಗಳಿಗೆ ನೀರು ಸರಬರಾಜು ಒದಗಿಸಲು ಹಾಲಿ ಯೋಜನೆಯಿಂದ ಸಾಧ್ಯವಾಗುತ್ತಿಲ್ಲ. ಆದ್ದರಿಂದ ಈ ಪಟ್ಟಣಕ್ಕೆ ಹೆಚ್ಚುವರಿ ನೀರು ಸರಬರಾಜು ಯೋಜನೆಯನ್ನು ರೂಪಿಸುವ ಅವಶ್ಯಕತೆ ಇರುತ್ತದೆ.

ಈ ಸಮಸ್ಯೆಯನ್ನು ಪರಿಹರಿಸಲು ಕೃಷ್ಣಾನದಿ ಮೂಲದಿಂದ ನೀರು ಸರಬರಾಜು ಮಾಡುವ ಯೋಜನೆಯನ್ನು ಕೃಷ್ಣಾನದಿಗೆ ಅಡ್ಡಲಾಗಿ ನಿರ್ಮಿಸಲಾಗಿರುವ ಗೂಗಲ್ ಬ್ಯಾರೇಜ್ ಹಿನ್ನೀರನ್ನು ಮೂಲವಾಗಿಟ್ಟುಕೊಂಡು ನೀರು ಸರಬರಾಜು ಯೋಜನೆಯನ್ನು ರೂಪಿಸಲಾಗಿದೆ. ಈ ಯೋಜನೆಯಡಿ 2027ಕ್ಕೆ ಅಂದಾಜಿಸಲಾದ 61,985 ಹಾಗೂ 2042ರಲ್ಲಿ ಅಂದಾಜಿಸಲಾದ 91,370 ಜನಸಂಖ್ಯೆಗೆ ತಲಾ ದಿನಂಪ್ರತಿ 135 ಲೀಟರ್‌ನಂತೆ ನೀರು ಸರಬರಾಜು ಮಾಡಲು ವಿನ್ಯಾಸಗೊಳಿಸಲಾಗಿದೆ.

ಈ ಯೋಜನೆಯನ್ನು ಮಂಡಳಿಯ 2009–10ನೇ ಸಾಲಿನ ಮಂಡಳಿಯ ಮತ್ತು ಲೋಕೋಪಯೋಗಿ ಇಲಾಖೆಯ ದರಪಟ್ಟಿಗಳನ್ವಯ ಮತ್ತು ಮಂಡಳಿಯ ಆರ್.ಸಿ./ಮಾರುಕಟ್ಟೆ ದರಗಳನ್ನು ಆಧರಿಸಿ ತಯಾರಿಸಲಾಗಿದ್ದು. ಈ ಯೋಜನೆಯನ್ನು 2011–12ನೇ ಸಾಲಿನ ಕ್ರಿಯಾಯೋಜನೆಯಲ್ಲಿ ಪ್ರವರ್ಗ–ಡಿ ಅಡಿಯಲ್ಲಿ ಸೇರಿಸಿ ಕೊಳವೆ ನೀರು ಸರಬರಾಜು ಯೋಜನೆಯಡಿ ಪ್ರಸ್ತುತ ಸಾಲಿನಲ್ಲಿ ರೂ. 1550.00 ಲಕ್ಷಗಳ ಮೊತ್ತವನ್ನು ಅನುವು ಮಾಡಲಾಗಿದೆ.

ಮಂಡಳಿಯು ಈ ಯೋಜನೆಯನ್ನು ಕೊಳವೆ ನೀರು ಸರಬರಾಜು ಯೋಜನೆಯಡಿ ಕೈಗೆತ್ತಿಕೊಳ್ಳಲು ಪ್ರಸ್ತಾವನೆ ಸಲ್ಲಿಸಿದ್ದು, ಅದರಂತೆ ಸದರಿ ಯೋಜನೆಯ ಅಂದಾಜನ್ನು ಸಂಪೂರ್ಣವಾಗಿ ಸರ್ಕಾರದ ಅನುದಾನದಲ್ಲಿ ಪೂರ್ಣಗೊಳಿಸಬೇಕಾಗಿರುತ್ತದೆ. ಆದರೆ, ಪ್ರಸ್ತುತ ಸರ್ಕಾರವು ಹಾಲಿ

ಜಾರಿಯಲ್ಲಿರುವ ನೀರು ಸರಬರಾಜು ಯೋಜನೆಗಳ ಆರ್ಥಿಕ ಮಾದರಿಯನ್ನು ಸರ್ಕಾರದ ಆದೇಶ ಸಂಖ್ಯೆ: ನಅಇ 07 ಯುಡಬ್ಲ್ಯೂಎಸ್ 2011, ದಿನಾಂಕ 20-7-2011 ಪರಿಷ್ಕರಿಸಿದ್ದು, ಅದರಂತೆ ಈ ಯೋಜನೆಯ ಅಂದಾಜನ್ನು ಸರ್ಕಾರದ ಅನುದಾನದಿಂದ ಹಣಕಾಸು ಸಂಸ್ಥೆಗಳಿಂದ ಸಾಲ ಹಾಗೂ ಸ್ಥಳೀಯ ಸಂಸ್ಥೆಗಳ ವಂತಿಕೆಯಿಂದ ಯೋಜನೆಯ ಅಂದಾಜನ್ನು ಭರಿಸಬೇಕಾಗಿರುತ್ತದೆ. ಸದರಿ ಆದೇಶದನ್ವಯ ಈ ಯೋಜನೆಯ ಆರ್ಥಿಕ ಮಾದರಿಯನ್ನು ಈ ಕೆಳಕಂಡಂತೆ ನಿಗದಿಗೊಳಿಸಬೇಕಾಗಿರುತ್ತದೆ.

| | |
|---|---|
| ಕರ್ನಾಟಕ ಸರ್ಕಾರದ ಅನುದಾನ (75%) | ರೂ. 3487.50 ಲಕ್ಷಗಳು |
| ಆರ್ಥಿಕ ಸಂಸ್ಥೆಗಳಿಂದ ಸಾಲ (20%) | ರೂ. 930.00 ಲಕ್ಷಗಳು |
| ಸ್ಥಳೀಯ ಸಂಸ್ಥೆಯ ವಂತಿಕೆ (05%) | ರೂ. 232.50 ಲಕ್ಷಗಳು |
| **ಒಟ್ಟು** | **ರೂ. 4650.00 ಲಕ್ಷಗಳು** |

ಸರ್ಕಾರವು ಯೋಜನೆಯ ಅಂದಾಜಿನಲ್ಲಿ ವಿದಿಸಲಾಗುತ್ತಿರುವ ಇಟಿಪಿ, ದರಗಳನ್ನು ಶೇಕಡ 5ಕ್ಕೆ ಮಿತಿಗೊಳಿಸಲು ನಿರ್ಧರಿಸುವ ಹಿನ್ನೆಲೆಯಲ್ಲಿ ಹಾಗೂ ಯೋಜನೆಯಡಿ ಉದ್ಭವಿಸಬಹುದಾದ ಟೆಂಡರ್ ಪ್ರೀಮಿಯಮ್ ಮತ್ತು ಎಸ್ಕಲೇಶನ್ ದರಗಳನ್ನು ಸ್ಥಳೀಯ ಸಂಸ್ಥೆಯೇ ಬರಿಸಬೇಕಾಗಿರುವುದರಿಂದ ಸದರಿ ಮೊತ್ತಗಳನ್ನು ಅಂದಾಜು ಪಟ್ಟಿಯಿಂದ ಹೊರತು ಪಡಿಸಲು ತೀರ್ಮಾನಿಸಿದೆ. ಅದರಂತೆ ಯೋಜನೆಯ ಅಂದಾಜು ವೆಚ್ಚದಲ್ಲಿ ಮೂಲ ಅಂದಾಜು ಮೊತ್ತವಾದ ರೂ. 3646.98 ಲಕ್ಷಗಳಿಗೆ ಶೇಕಡ 5 ರಷ್ಟು ಇಟಿಪಿ ದರಗಳನ್ನು ಮತ್ತು ಇತರೆ ಠೇವಣಿ ರೂ. 4.50 ಲಕ್ಷಗಳನ್ನು ಹಾಗೂ ಇತರೆ ವೆಚ್ಚಗಳಾದ ರೂ. 0.17 ಲಕ್ಷಗಳನ್ನು ಸೇರಿಸಿ ಯೋಜನೆಯ ಅಂದಾಜು ಮೊತ್ತವನ್ನು ರೂ. 3834.00 ಲಕ್ಷಗಳಿಗೆ ಮಿತಿಗೊಳಿಸಬೇಕಾಗಿದೆ.

ಸರ್ಕಾರವು ಮಂಡಳಿಯ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 13 ಯುಡಬ್ಲ್ಯೂಎಸ್ 2010, ಬೆಂಗಳೂರು, ದಿನಾಂಕ 17-01-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದೇವದುರ್ಗ ಪಟ್ಟಣಕ್ಕೆ ಕೃಷ್ಣಾ ನದಿ ಮೂಲದಿಂದ ಹೆಚ್ಚುವರಿ ನೀರು ಸರಬರಾಜು ಯೋಜನೆಯನ್ನು ಅಂದಾಜು ರೂ. 3834.00 ಲಕ್ಷಗಳಲ್ಲಿ (ರೂ. ಮೂರು ಸಾವಿರದ ಎಂಟುನೂರ ಮೂವತ್ತನಾಲ್ಕು ಲಕ್ಷಗಳು ಮಾತ್ರ) ನೀರು ಸರಬರಾಜು ಕಲ್ಪಿಸುವ ಯೋಜನೆಗೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1) The Escalation charges should not form part of the estimate. It should be borne by the concerned ULB. The estimate is reduced to such extent.
2) The board shall invite the tender immediately after the handing over of the land required under the scheme in order to avoid time and cost run over.
3) The consent of the ULB shall be obtained for the extra cost that might occur due to deviations, extra item works or variations in the scheme.
4) Adequate provision to be made by the Board in the following years for timely completion of the Project.
5) Water rates as proposed by KUWS & DB have to be implemented to meet O & M cost of WS.
6) KTPP provisions, quality control and timely completion should be ensured
7) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.
8) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.
9) ಇದಲ್ಲದೆ ಮಂಡಳಿಯು ಹೊಸ ಆರ್ಥಿಕ ಮಾದರಿಯಂತೆ ಸ್ಥಳೀಯ ಸಂಸ್ಥೆಯ ವಂತಿಯನ್ನು ಪಡೆಯಲು ಸೂಕ್ತ ಠರಾವನ್ನು ಪಡೆದು ನಂತರ ಯೋಜನೆ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಬೇಕಾಗಿರುತ್ತದೆ.
10) ಗೂಗಲ್ ಬ್ಯಾರೇಜಿನ ಸಮೀಪ ಸದರಿ ಕುಡಿಯುವ ನೀರಿನ ಯೋಜನೆಗೆ ಸಂಬಂಧಿಸಿದ ಕಟ್ಟಡಗಳ ವಿನ್ಯಾಸ ನಕ್ಷೆಗಳನ್ನು ಕೃಷ್ಣಾಭಾಗ್ಯ ಜಲ ನಿಗಮ ನಿಯಮಿತಗೆ ಸಲ್ಲಿಸಿ ಅನುಮೋದನೆ ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
11) ಗೂಗಲ್ ಬ್ಯಾರೇಜಿನಲ್ಲಿ ಏಪ್ರಿಲ್‌ನಿಂದ ಜೂನ್/ಜುಲೈ ಕೊನೆಯವರೆಗೆ ನೀರಿನ ಸಂಗ್ರಹಣೆ ಕಡಿಮೆ ಇದ್ದು, ನೀರಾವರಿ ಹಾಗೂ ಕುಡಿಯುವ ನೀರಿನ ಬೇಡಿಕೆಯನ್ನು ಪೂರೈಸಬೇಕಾಗಿರುತ್ತದೆ. ಈ ಅವಧಿಯಲ್ಲಿ ಬ್ಯಾರೇಜಿನಲ್ಲೂ ನೀರಿನ ಸಂಗ್ರಹಣೆ ಕಡಿಮೆ ಇರುವ ಸಾಧ್ಯತೆ ಇರುವುದರಿಂದ, ಸದರಿ ಅವಧಿಯಲ್ಲಿನ ಬೇಡಿಕೆಯನ್ನು ಬ್ಯಾರೇಜಿನ ಡೆಡ್ ಸ್ಟೋರೇಜ್‌ನಿಂದ ಒದಗಿಸಬೇಕಾಗಿರುವುದರಿಂದ ಈ ಬೇಡಿಕೆಯನ್ನು ಮುಂಚಿತವಾಗಿಯೇ ಅಂದರೆ ಜನವರಿ ತಿಂಗಳಲ್ಲೇ, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಅಧಿಕಾರಿಗಳು ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತದ ಸಂಬಂಧಪಟ್ಟ ಅಧಿಕಾರಿಗಳಿಗೆ ತಿಳಿಸುವುದು.
12) ಕಾಮಗಾರಿಯನ್ನು ಪೂರ್ಣಗೊಳಿಸಿ ನೀರನ್ನು ಬಳಸುವ ಮುನ್ನ ನಿಗಮದ ಒಪ್ಪಿಗೆಯನ್ನು ಪಡೆದು ನೀರನ್ನು ಬಳಸಬಹುದು.

ಈ ಅದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 561 Exp-9/2010, ದಿನಾಂಕ 27-08-2010 ಮತ್ತು ಟಿಪ್ಪಣಿ ಸಂಖ್ಯೆ: FD 554 Exp-9/2011, ದಿನಾಂಕ 31-10-2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ. ಎಂ. ವಾಸುದೇವರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

ಪಿ.ಆರ್. 374

**ಶಿಕ್ಷಣ ಸಚಿವಾಲಯ**

**ತಿದ್ದುಪಡಿ ಅದೇಶ**

ಸಂಖ್ಯೆ: ಇಡಿ 90 ಎಂಸಿಡಿ 2010 (ಭಾಗ) ಬೆಂಗಳೂರು, ದಿನಾಂಕ 06–01–2012

**ವಿಷಯ :** ರಾಜ್ಯದಲ್ಲಿ ಪ್ರಾರಂಭಿಸಿರುವ 74 ಆದರ್ಶ ವಿದ್ಯಾಲಯಗಳಿಗೆ ಶಿಕ್ಷಕರನ್ನು ನೇಮಕಾತಿ ಮಾಡುವ ಕುರಿತು.–

**ಉಲ್ಲೇಖ :** 1)ಸರ್ಕಾರದ ಆದೇಶ ಸಂಖ್ಯೆ: ಇಡಿ 90 ಎಂಸಿಡಿ 2010 (ಭಾಗ), ದಿನಾಂಕ 30–11–2011

2) ನಿರ್ದೇಶಕರು, ರಾಷ್ಟ್ರೀಯ ಮಾಧ್ಯಮಿಕ ಶಿಕ್ಷಣ ಅಭಿಯಾನ ರವರ ಪತ್ರ ಸಂಖ್ಯೆ: ಆರ್.ಎಂ.ಎಸ್.ಎ./ಅವಿ/ಶಿನೇ/ ಸಿ&ಆರ್) 47/2011–12, ದಿನಾಂಕ 26–12–2011.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖ (1)ರ ಸರ್ಕಾರದ ಆದೇಶದ ಭಾಗದಲ್ಲಿ 148 ಗ್ರೂಪ್ "ಡಿ" ಸಿಬ್ಬಂದಿ ಸೇರಿದಂತೆ ಒಟ್ಟು 962 ಮಂದಿಯನ್ನು ನೇರ ನೇಮಕಾತಿ ಮುಖಾಂತರ ನೇಮಕಾತಿ ಮಾಡಿಕೊಳ್ಳಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ರವರಿಗೆ ಆದೇಶ ನೀಡಲಾಗಿತ್ತು. ಉಲ್ಲೇಖ (2)ರಲ್ಲಿ ನಿರ್ದೇಶಕರು, ರಾಷ್ಟ್ರೀಯ ಮಾಧ್ಯಮಿಕ ಶಿಕ್ಷಣ ಅಭಿಯಾನ ರವರು 148 ಗ್ರೂಪ್ "ಡಿ" ನೌಕರರ ಹುದ್ದೆಗಳಿಗೆ 74 ಕಛೇರಿ ಸಹಾಯಕರು (ಪ್ರಥಮ ದರ್ಜೆ ಸಹಾಯಕರು) ಮತ್ತು 74 ಗ್ರೂಪ್ "ಡಿ" ಎಂದು ತಿದ್ದುಪಡಿ ಆದೇಶ ಕೋರಿದ್ದು.

ಅದರಂತೆ ಉಲ್ಲೇಖ (1)ರ ಸರ್ಕಾರದ ಆದೇಶದ ಭಾಗದ ಒಟ್ಟು 222 ಶಿಕ್ಷಕರು ಹಾಗೂ ನಂತರದ 148 ಗ್ರೂಪ್ "ಡಿ" ಪದಗಳ ಬದಲಾಗಿ 74 ಕಛೇರಿ ಸಹಾಯಕರು (ಪ್ರಥಮ ದರ್ಜೆ ಸಹಾಯಕರು) ಮತ್ತು 74 ಗ್ರೂಪ್ "ಡಿ" ಪದಗಳನ್ನು ಸೇರಿಸಿ ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಉಳಿದ ಅಂಶಗಳು ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಎಫ್. ಮಾಗಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 375 ಶಿಕ್ಷಣ ಇಲಾಖೆ (ಯೋಜನೆ)

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ :** ಶ್ರೀ ಹೆಚ್. ರಾಮಕೃಷ್ಣೇಗೌಡ, ಜಂಟಿ ನಿರ್ದೇಶಕರು, ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆ, ನಿಯೋಜನೆಯ ಮೇರೆಗೆ ವಿಶೇಷಾಧಿಕಾರಿ ಎಂ.ಎಸ್.ಐ.ಎಲ್.ನಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸುವ ಬಗ್ಗೆ.–

**ಓದಲಾಗಿದೆ :**
1) ಎಂ.ಡಿ., ಎಂ.ಎಸ್.ಐ.ಎಲ್. ಬೆಂಗಳೂರು ರವರ ಪತ್ರ ಸಂಖ್ಯೆ: ಎಂ.ಡಿ. 004/2011–12, ದಿನಾಂಕ 03–05–2011.
2) ಕಾರಣ ಕೇಳುವ ನೋಟೀಸ್ ಪತ್ರದ ಸಂಖ್ಯೆ: 61 ಕೈಸೇವಿ 2011, ದಿನಾಂಕ 25–07–2011
3) ಶ್ರೀ ಹೆಚ್. ರಾಮಕೃಷ್ಣೇಗೌಡ, ಜಂಟಿ ನಿರ್ದೇಶಕರು, ಇವರ ರಕ್ಷಣಾ ಹೇಳಿಕೆ ದಿನಾಂಕ 02–09–2011.
4) ಸರ್ಕಾರದ ಪತ್ರದ ಸಂಖ್ಯೆ: ವಾಕೈ 61 ಕೈಸೇವಿ 2011, ದಿನಾಂಕ 18–10–2011
5) ವ್ಯವಸ್ಥಾಪಕ ನಿರ್ದೇಶಕರು, ಎಂ.ಎಸ್.ಐ.ಎಲ್. ಬೆಂಗಳೂರು ರವರ ಪತ್ರ ಸಂಖ್ಯೆ: ಎಂ.ಡಿ. 161/2011–12, ದಿನಾಂಕ 18–11–2011.
6) ಕಾರಣ ಕೇಳುವ ನೋಟೀಸ್ ಪತ್ರದ ಸಂಖ್ಯೆ: 61 ಕೈಸೇವಿ 2011, ದಿನಾಂಕ 21–11–2011.
7) ಅಧಿಕಾರಿಯ ರಕ್ಷಣಾ ಹೇಳಿಕೆ ದಿನಾಂಕ 07–12–2011

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್ ರವರು ಕಬ್ಬಿಣ ಅದಿರಿನ ರಫ್ತು ಹಗರಣಕ್ಕೆ ಸಂಬಂಧಿಸಿದಂತೆ ಶ್ರೀ ಕುಕ್ಕಜೆ ರಾಮಕೃಷ್ಣ ಭಟ್ ನಿವೃತ್ತ ಜಿಲ್ಲಾ ನ್ಯಾಯಾಧೀಶ ರವರು ಸಲ್ಲಿಸಿದ ಪೂರ್ಣ ಪ್ರಮಾಣದ ಪ್ರಾಥಮಿಕ ತನಿಖಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆ. ಅದರಂತೆ, ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಕಾರಣ ಕೇಳುವ ನೋಟೀಸಿನಲ್ಲಿ ಪ್ರಾಥಮಿಕ ತನಿಖಾ ವರದಿಯ ಆಧಾರದ ಮೇಲೆ ಮೇಲ್ನೋಟಕ್ಕೆ ಆರೋಪಗಳು ಕಂಡು ಬಂದಿರುವುದರಿಂದ ಆರೋಪಗಳ ಬಗ್ಗೆ ಹೇಳಿಕೆಯನ್ನು ಸಲ್ಲಿಸುವಂತೆ ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರಡಿ ಶಿಸ್ತುಕ್ರಮ ಪ್ರಾರಂಭಿಸಲಾಗುವುದು ಎಂದು ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಶ್ರೀ ಹೆಚ್. ರಾಮಕೃಷ್ಣೇಗೌಡ, ಜಂಟಿ ನಿರ್ದೇಶಕರು ವಿವರಣೆಯನ್ನು ಸಲ್ಲಿಸಿ, ಯಾವುದೇ ಆರೋಪ ಮಾಡಿರುವುದಿಲ್ಲ, ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಸೂಚನೆಯ ಮೇರೆಗೆ ಕಾರ್ಯನಿರ್ವಹಿಸಿರುತ್ತೇನೆ. ಸಂಸ್ಥೆಗೆ ನಷ್ಟವಾಗುವಂತಹ ಯಾವುದೇ ನಿರ್ಧಾರ ತೆಗೆದುಕೊಂಡಿರುವುದಿಲ್ಲ ಎಂಬುದಾಗಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸುತ್ತಾ ಅವರ ಮೇಲಿನ ಪ್ರಸ್ತಾವನೆಯನ್ನು ಕೈಬಿಡಲು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಅಧಿಕಾರಿಯ ರಕ್ಷಣಾ ಹೇಳಿಕೆಯನ್ನು ವ್ಯವಸ್ಥಾಪಕ ನಿರ್ದೇಶಕರವರಿಗೆ ಕಳುಹಿಸಿ, ಪ್ರಸ್ತುತ ವಿಷಯದ ಬಗ್ಗೆ ಸಂಸ್ಥೆಯ ಅಂತಿಮ ತೀರ್ಮಾನವನ್ನು ಸರ್ಕಾರಕ್ಕೆ ತಿಳಿಸುವಂತೆ ಕೋರಲಾಗಿದೆ. ಅದರಂತೆ, ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ಶ್ರೀ ಹೆಚ್. ರಾಮಕೃಷ್ಣೇಗೌಡ ರವರು ಎಂ.ಎಸ್.ಐ.ಎಲ್. ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿರುವ ಅವ್ಯವಹಾರಗಳಿಗೆ ಸಂಬಂಧಪಟ್ಟಂತೆ ಕಾರಣ ಕೇಳುವ ನೋಟೀಸ್ ಜಾರಿಗೊಳಿಸಿದ್ದು ಸದರಿ ನೋಟೀಸಿಗೆ ಅಧಿಕಾರಿಯು ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು ರಕ್ಷಣಾ ಹೇಳಿಕೆಯು ಸಮಂಜಸವಲ್ಲವೆಂದು ಮತ್ತು ಪ್ರಕರಣಕ್ಕೆ ಸಂಬಂಧಿಸಿದಂತೆ, ಸದರಿ ಅಧಿಕಾರಿಯ ವಿರುದ್ಧ ಕ್ರಮ ಜರುಗಿಸಲು ದೋಷಾರೋಪಣಾ ಪಟ್ಟಿ ಹಾಗೂ ಇತರೆ ಪ್ರತಿಗಳೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರದಲ್ಲಿ ಶ್ರೀ ಹೆಚ್. ರಾಮಕೃಷ್ಣೇಗೌಡ, ಜಂಟಿ ನಿರ್ದೇಶಕರು, ಇವರಿಗೆ ನಿಯಮಾವಳಿಯನುಸಾರ ದೋಷಾರೋಪಣಾ ಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸನ್ನು ದಿನಾಂಕ 21–11–2011ರಂದು ಜಾರಿ ಮಾಡಿರುತ್ತದೆ. ಅದರಂತೆ, ಸದರಿ ಅಧಿಕಾರಿಯವರು ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಲಿಖಿತ ಉತ್ತರವನ್ನು ನೀಡಿ ಆರೋಪಗಳನ್ನು ಕೈಬಿಡುವಂತೆ ಕೋರಿದ್ದಾರೆ.

ಪ್ರಕರಣದಲ್ಲಿನ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ಕಂಡು ಹಿಡಿಯಲು ಇಲಾಖಾ ವಿಚಾರಣೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 61 ಕೈಸೇವಿ 2011, ಬೆಂಗಳೂರು, ದಿನಾಂಕ 13-01-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಹೆಚ್. ರಾಮಕೃಷ್ಣೇಗೌಡ, ಜಂಟಿ ನಿರ್ದೇಶಕರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ನಿಯೋಜನೆ ಮೇರೆಗೆ ವಿಶೇಷಾಧಿಕಾರಿ ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಕಬ್ಬಿಣದ ಅದಿರಿನ ಬಗ್ಗೆ ಮಾಡಲಾದ ಆರೋಪಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರ ಉಪನಿಯಮ 5 ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಎಸ್. ಇಂಧೂದರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ. 8, 15ನೇ ಕ್ರಾಸ್, 5ನೇ ಫೇಸ್, ಜೆ.ಪಿ. ನಗರ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತುಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಶ್ರೀ ಶಂಕರ ಚವ್ಹಾಣ್, ಉಪ ಪ್ರಧಾನ ವ್ಯವಸ್ಥಾಪಕರು, (D.G.M.) ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್, ಬೆಂಗಳೂರು ಇವರನ್ನು ಅಥವಾ ಇವರ ಸ್ಥಾನದಲ್ಲಿಮುಂದೆ ವರ್ಗಾವಣೆಗೊಂಡು ಕರ್ತವ್ಯ ನಿರ್ವಹಿಸುವಂತಹ ಅಧಿಕಾರಿಯನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್, ಬೆಂಗಳೂರು ಇಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಸ್ಥಳಾವಕಾಶ ಲಭ್ಯವಿರುವ ಶೀಘ್ರಲಿಪಿಗಾರರು/ಬೆರಳಚ್ಚುಗಾರರ ಸೇವೆಯನ್ನು ಒದಗಿಸಲು ಮತ್ತು ಅಗತ್ಯವಿರುವ ಲೇಖನ ಸಾಮಗ್ರಿಗಳನ್ನು ಒದಗಿಸಲು ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್, ಬೆಂಗಳೂರು ಇವರಿಗೆ ಸೂಚಿಸಿದೆ.

ವಿಚಾರಣಾ ವರದಿಯನ್ನು ಮೂರು ತಿಂಗಳ ಅವಧಿಯೊಳಗೆ ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸುವಂತೆ ಆದೇಶಿಸಿದೆ. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 6 ಸೇಇವಿ 2010.

ದಿನಾಂಕ 28-04-2011 ರನ್ವಯ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯು ಸಂಭಾವನೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಲ್. ಎಸ್. ವಾಸನ್**
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

ಪಿ.ಆರ್. 376

## ವಸತಿ ಸಚಿವಾಲಯ

**ವಿಷಯ :** ಸುವರ್ಣ ಕರ್ನಾಟಕ **ಕಾರ್ಯಕ್ರಮದಡಿ** ಕರ್ನಾಟಕ ಗೃಹ ಮಂಡಳಿಯು 50 ಮಾದರಿ ವಸತಿ ಯೋಜನೆಗಳನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಆಯುಕ್ತರು, ಕರ್ನಾಟಕ ಗೃಹ ಮಂಡಳಿರವರ ಪತ್ರ ಸಂಖ್ಯೆ: ಕಗೃಮಂ/ಪ್ರವ್ಯ(ತಾಂ) /ಮುಮಾಪವಯೋ/ಬೇಸ/23/2004-05, ದಿನಾಂಕ: 12-04-2005.
2. ಆಯುಕ್ತರು, ಕರ್ನಾಟಕ ಗೃಹ ಮಂಡಳಿ ರವರ ಪತ್ರ ಸಂಖ್ಯೆ: ಕಗೃಮಂ /ಪ್ರವ್ಯ /(ತಾಂ) /ಮುಮಾಪವಯೋ/ಬೇಸ/23/2004-05, ದಿನಾಂಕ: 10-01-2006.

**ಪ್ರಸ್ತಾವನೆ :**

ಓದಲಾದ ಕ್ರಮ ಸಂಖ್ಯೆ 1 ಮತ್ತು 2 ರಲ್ಲಿ ಕರ್ನಾಟಕ ಗೃಹ ಮಂಡಳಿಯು ಸುವರ್ಣ ಕರ್ನಾಟಕ ಕಾರ್ಯಕ್ರಮದಡಿ 50 ಮಾದರಿ ವಸತಿ ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ ಪ್ರಸ್ತಾಪಿಸಲಾಗಿರುತ್ತದೆ.

ಓದಲಾದ ಕ್ರಮ ಸಂಖ್ಯೆ: 2 ರಲ್ಲಿ ಸುವರ್ಣ ಕರ್ನಾಟಕ ಕಾರ್ಯಕ್ರಮದಡಿಯಲ್ಲಿ ಸುವರ್ಣ ಕರ್ನಾಟಕ ವಸತಿ ಯೋಜನೆಯಡಿಯಲ್ಲಿ 50 ಮಾದರಿ ವಸತಿ ಯೋಜನೆಗಳನ್ನು ಕಾರ್ಯಗತಗೊಳಿಸಲು ದಿನಾಂಕ: 16-12-2004 ರಂದು ನಡೆದ 390ನೇ ಮಂಡಳಿ ಸಭೆಯಲ್ಲಿ ಅನುಮೋದನೆಯನ್ನು ನೀಡಿರುವುದಾಗಿದೆ ತಿಳಿಸಲಾಗಿರುತ್ತದೆ.

ಈಗಾಗಲೇ ಕರ್ನಾಟಕ ಗೃಹ ಮಂಡಳಿ ಹಮ್ಮಿಕೊಂಡಿರುವ 100 ವಸತಿ ಯೋಜನೆಗಳ ಕಾರ್ಯಕ್ರಮವನ್ನು ಮುಗಿಯುವ ಹಂತದಲ್ಲಿದ್ದು. ಈ ಪೈಕಿ 91 ಯೋಜನೆಗಳು ಪೂರ್ಣವಾಗಿದ್ದು, ಇನ್ನು 09 ಯೋಜನೆಗಳು ಬೇಗನೆ ಮುಗಿಯುತ್ತಲಿದ್ದು. ಈ ಹಿನ್ನೆಲೆಯಲ್ಲಿ ಯಶಸ್ವಿಗೊಂಡಿರುವ 100 ವಸತಿ ಯೋಜನೆಗಳ ಮಾದರಿಯಲ್ಲಿಯೇ ಕರ್ನಾಟಕ ಗೃಹ ಮಂಡಳಿಯು ಈ ಸುವರ್ಣ ಕರ್ನಾಟಕ ಕಾರ್ಯಕ್ರಮದಡಿ 50 ಮಾದರಿ ವಸತಿ ಯೋಜನೆಗಳನ್ನು ಅನುಷ್ಠಾನಗೊಳಿಸಲು ಉದ್ದೇಶಿಸಿದ್ದು, ಈ ಕಾರ್ಯಕ್ರಮವನ್ನು ತಾಲ್ಲೂಕು ಮತ್ತು ಜಿಲ್ಲಾ ಕೇಂದ್ರಗಳಲ್ಲಿ ಕೈಗೊಳ್ಳಲು ಪ್ರಸ್ತಾಪಿಸಲಾಗಿದ್ದು, ಮೊದಲ ಸಂದರ್ಭದಲ್ಲಿ ಇದನ್ನು ಭೂಮಿ ಲಭ್ಯತೆಯ ಆಧಾರದ ಮೇಲೆ 50 ಸ್ಥಳಗಳನ್ನು ಗುರುತಿಸಿದ್ದು, ಈ ಯೋಜನೆಯನ್ನು ಮಂಡಳಿಯ Self finance schemes ಅಡಿಯಲ್ಲಿ ರೂ. 1,40,685/- ಲಕ್ಷಗಳ ಅಂದಾಜು ವೆಚ್ಚದಲ್ಲಿ ಕಾರ್ಯಗತಗೊಳಿಸಲಾಗುವುದು.

ಪ್ರಸ್ತಾಪಿತ ವಸತಿ ಬಡಾವಣೆಗಳ ಪ್ರಮುಖ ಲಕ್ಷಣಗಳ ಬಗ್ಗೆ ಅನುಬಂಧ-1 ರಲ್ಲಿಯ ಹಾಗೂ ಸದರಿ ಯೋಜನೆಯ ಸ್ಥಳ ಮತ್ತು ವೆಚ್ಚದ ಬಗ್ಗೆ ಅನುಬಂಧ-2 ರಲ್ಲಿ ವಿವರಗಳನ್ನು ನೀಡಲಾಗಿದೆ.

ಸದರಿ ಯೋಜನೆಗೆ ಆರ್ಥಿಕ ಇಲಾಖೆಯು ಹಿಂಬರಹ ಸಂಖ್ಯೆ ಎಫ್‌ಡಿ/494 ವೆಚ್ಚ-9/2007 ದಿನಾಂಕ: 18-04-2007 ರಲ್ಲಿ ಕರ್ನಾಟಕ ಗೃಹ ಮಂಡಳಿಯು 50 ಮಾದರಿ ವಸತಿ ಯೋಜನೆಗಳನ್ನು ಅನುಷ್ಠಾನಗೊಳಿಸಲು ಆರ್ಥಿಕ ಇಲಾಖೆಯ ಅಭ್ಯಂತರವಿಲ್ಲವೆಂದು ತಿಳಿಸಿದ್ದು ಈ ಕೆಳಕಂಡಂತೆ ಷರತ್ತುಗಳನ್ನು ವಿಧಿಸಿದೆ.

1. No Government Guarantee or financial support would be provided for the project.
2. Administrative Department will take into account all the observation raised by Audit on its 100 Housing Scheme project, most importantly demand survey and feasibility analysis and ensure that the same do not recur.
3. Finance Department also opines that debt component of the project be reduced and financial model be subjected to sensitivity analysis before Karnataka Housing Board embarks on the project.
4. Administrative Department is also requested to explore the possibility of equity investment from Joint venture partner as an option to bring down debt component.
5. Administrative Department may also take the approval of the Cabinet for the project.

ಸುವರ್ಣ ಕರ್ನಾಟಕ ಕಾರ್ಯಕ್ರಮಗಳಡಿ ಅನುಷ್ಠಾನಗೊಳ್ಳಲಿರುವ 50 ಸ್ಥಳಗಳಲ್ಲಿನ ಯೋಜನೆಗಳನ್ನು ಅನುಷ್ಠಾನಗೊಳಿಸುವಾಗ ಪ್ರತಿಯೊಂದು ಯೋಜನೆಯ ಪ್ರಸ್ತಾವನೆಯನ್ನು ಪ್ರತ್ಯೇಕವಾಗಿ ಸರ್ಕಾರಕ್ಕೆ ಸಲ್ಲಿಸಿ ಆಡಳಿತಾತ್ಮಕ ಅನುಮೋದನೆಯನ್ನು ಪಡೆಯತಕ್ಕದ್ದು.

ದಿನಾಂಕ: 15–06–2007 ರಂದು ನಡೆದ ಸಭೆಯ ಸಂಪುಟದ ಸಭೆಯಲ್ಲಿ ಈ ಯೋಜನೆಯನ್ನು ಮಂಡಳಿಯ Self finance scheme ಅಡಿಯಲ್ಲಿ ರೂ. 1,40,685–00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕಾರ್ಯಗತಗೊಳಿಸಲು ಅನುಮೋದನೆ ನೀಡಿದೆ ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ವಇ 178 ಕಗೃಮಂ 2005, ಬೆಂಗಳೂರು, ದಿನಾಂಕ : 13–07–2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸುವರ್ಣ ಕರ್ನಾಟಕ ಕಾರ್ಯ ಕ್ರಮದಡಿ ಕರ್ನಾಟಕ ಗೃಹ ಮಂಡಳಿಯು 50 ಮಾದರಿ ವಸತಿ ಯೋಜನೆಗಳನ್ನು ಅನುಷ್ಠಾನಗೊಳಿಸಲು ಪ್ರಕರಣ ಸಂಖ್ಯೆ: ಸಿ/261/2007 ರಂದು ಈ ಕೆಳಕಂಡ ಅಂಶಗಳಿಗೆ ಕರ್ನಾಟಕ ಸರ್ಕಾರ (ವ್ಯವಹಾರ ನಿರ್ವಹಣೆ) ನಿಯಮಗಳು 1977 ರ ಷೆಡ್ಯುಲ್ 1 ರಲ್ಲಿನ ಐಟಂ 36 ರಂತೆ ಸಚಿವ ಸಂಪುಟವು ಅನುಮೋದನೆಯನ್ನು ನೀಡಿರುತ್ತದೆ. ಅದರಂತೆ ಸಚಿವ ಸಂಪುಟದ ಸಹಮತಿ ಮೇರೆಗೆ ಈ ಆದೇಶವನ್ನು ಹೊರಡಿಸಲಾಗಿದೆ.

1. ಕರ್ನಾಟಕ ಗೃಹ ಮಂಡಳಿಯಿಂದ "ಸುವರ್ಣ ಕರ್ನಾಟಕ ವಸತಿ ಯೋಜನೆಯನ್ನು ರೂ. 1,40,685/– ಲಕ್ಷಗಳ ಅಂದಾಜು ವೆಚ್ಚದಲ್ಲಿ ಅನುಬಂಧ–2 ರಲ್ಲಿ ತೋರಿಸಿರುವ ವಿವರಗಳಂತೆ ಅನುಷ್ಠಾನಗೊಳಿಸಲು".
2. ಹಣಕಾಸು ಸಂಸ್ಥೆಗಳಿಂದ, ಸರ್ಕಾರದ ಹಣಕಾಸಿನ ಸಹಾಯ/ಬದ್ಧತೆ ಇಲ್ಲದೆ, ಕರ್ನಾಟಕ ಗೃಹ ಮಂಡಳಿ ಕಾಯ್ದೆಯ ಸೆಕ್ಷನ್ 20ರನ್ವಯ ಸಾಲ ಪಡೆಯಲು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಸುಬ್ಬಯ್ಯ**
ಪೀಠಾಧಿಕಾರಿ–3, ವಸತಿ ಇಲಾಖೆ

## ಅನುಬಂಧ – 1

ಪ್ರಸ್ತಾಪಿತ ವಸತಿ ಬಡಾವಣೆಗಳ ಪ್ರಮುಖ ಲಕ್ಷಣಗಳ ವಿವರಗಳು:

- ಈ ಬಡಾವಣೆಗಳು ಸಮಾಜದ ಕಡಿಮೆ ಆದಾಯ ವರ್ಗದ ಜನರಿಂದ ಹಿಡಿದು ಉನ್ನತ ಆದಾಯ ವರ್ಗದ ಜನರಿಗೆ ಸೇರಿದಂತೆ ಎಲ್ಲಾಸ್ತರದ ಜನರಿಗೆ ಕೈಗೆಟ್ಟಿಗೊಳ್ಳುವುದು.
- ಸಾಕಾಗುವಷ್ಟು ನೀರು, ವಿದ್ಯುತ್ ಪೂರೈಕೆ ಮತ್ತು ಸ್ಯಾನಿಟರಿ ಸೌಲಭ್ಯಗಳು.
- ಸೀವೆಜ್ ಟ್ರೀಟ್‌ಮೆಂಟ್ ಮತ್ತು ಪವರ್ ಸಬ್ ಸ್ಟೇಷನ್‌ಗಳನ್ನು ಎಲ್ಲಾ ಬೃಹತ್ ಯೋಜನೆಗಳಿಗೆ: ಕಛೇರಿ, ಬ್ಯಾಂಕ್, ಷಾಪಿಂಗ್ ಕಾಂಪ್ಲೆಕ್ಸ್, ಶೈಕ್ಷಣಿಕ ಸಂಸ್ಥೆಗಳಿಗೆ ಅವಕಾಶ.
- ವಿಶೇಷ ಲಕ್ಷಣಗಳು–ಮಳೆ ನೀರು ಸಂಗ್ರಹಣೆ, ಕೆರೆಗಳ ಮರುಪೂರಣ, ಭೂ ಅಲಂಕಾರೋದ್ಯಾನ ರಚನೆ ಇತ್ಯಾದಿ.
- ಈ ಕೆಳಗೆ ತೋರಿಸಿರುವಂತೆ ಈ ಬಡಾವಣೆಗಳ ನಕಾಶೆ ಮತ್ತು ವಿನ್ಯಾಸಗಳನ್ನು ಪ್ರಚಲಿತ ಪಟ್ಟಣ ಯೋಜನೆಯ ಮಾನದಂಡಗಳು: ಸ್ಥಳೀಯ CDP/ODPUU ಗಳನ್ವಯ ಯೋಜನಾ/ಅಭಿವೃದ್ಧಿ ಪ್ರಾಧಿಕಾರಗಳು ಭೂ ಉಪಯೋಗಕ್ಕೆ ಸಂಬಂಧಿಸಿದಂತೆ ವಿಧಿಸುವ ಷರತ್ತುಗಳಿಗೆ ಅನುರೂಪವಾಗಿರುವುದು.

| ಕ್ರಮ ಸಂಖ್ಯೆ | ಭೂ ಉಪಯೋಗ | ಒಟ್ಟು ಸ್ಥಳದ ಶೇಕಡವಾರು |
|---|---|---|
| 1 | ವಾಸಕ್ಕೆ<br>ವಾಣಿಜ್ಯ<br>ಸಾರ್ವಜನಿಕ/ಅರೆ ಸಾರ್ವಜನಿಕ | 55<br>2–5<br>5–10 |
| 2 | ಉದ್ಯಾನ ಮತ್ತು ಬಯಲು ಪ್ರದೇಶ<br>ರಸ್ತೆಗಳು | 10<br>22–30 |

3) ಪ್ರಮುಖ ತಾಂತ್ರಿಕ ಲಕ್ಷಣಗಳು ಈ ಕೆಳಕಂಡಂತಿದೆ.

- ವಿಸ್ತೃತ ಯೋಜನಾ ವರದಿ (DPR) ಅನ್ನು ಪೂರ್ವಾರ್ಹತೆ ಪಡೆದಿರುವ ವಾಸ್ತುಶಿಲ್ಪ ಮತ್ತು ಇಂಜಿನಿಯರಿಂಗ್ ಸಂಸ್ಥೆಗಳಿಂದ ತಯಾರಿಸಲಾಗುವುದು.
- ಈ ಯೋಜನೆಗಳ ಮಾನಿಟರಿಂಗ್ ಅನ್ನು ಪ್ರಸಿದ್ಧ: ಪೂರ್ವಾರ್ಹತೆ ಪಡೆದ, ವೃತ್ತಿಪರ ಪ್ರಾಜೆಕ್ಟ್ ಮ್ಯಾನೇಜ್‌ಮೆಂಟ್ ಕನ್ಸಲ್ಟೆಂಟ್ (PMCs) ಗಳಿಂದ ಮಾಡಿಸಲಾಗುವುದು.
- ಈ ಯೋಜನೆಗಳನ್ನು ಪೂರ್ವಾರ್ಹತೆ ಪಡೆದ ಟರ್ನಕೀ ಗುತ್ತಿಗೆದಾರರಿಗೆ ವಹಿಸಲಾಗುವುದು. ಇವರುಗಳು ಪ್ರಾರಂಭದಿಂದ ಹಿಡಿದು, ಎಲ್ಲಾ ಸಿವಿಲ್ ಕಾಮಗಾರಿಗಳು, ರಸ್ತೆಗಳು, ವಿದ್ಯುಚ್ಛಕ್ತಿ, ನೀರು ಸರಬರಾಜು, ನೈರ್ಮಲ್ಯ ಮತ್ತು ಒಳಚರಂಡಿ ವ್ಯವಸ್ಥೆ, ಮತ್ತು ಸೀವೆಜ್ ಟ್ರೀಟ್‌ಮೆಂಟ್, ಭೂ ಅಲಂಕಾರೋದ್ಯಾನ ರಚನೆ, ಹಾಗೂ ಪಾರ್ಕ್, ಗಾರ್ಡನ್ ಮತ್ತು ಬಯಲು ಪ್ರದೇಶದ ಅಭಿವೃದ್ಧಿಯೊಳಗೊಂಡ, ಕಾಮಗಾರಿಗಳನ್ನು ನಿರ್ವಹಿಸುವರು.
- ಯೋಜನೆಗಳನ್ನು ಕಾರ್ಯಪಾಲಿಕೆ ಅಭಿಯಂತರರ ನೇತೃತ್ವದಲ್ಲಿರುವ ಪ್ರಾಜೆಕ್ಟ್ ಮಾನಿಟರಿಂಗ್ ಕಮಿಟಿಯು ಮಾನಿಟರ್ ಮಾಡುತ್ತದೆ. ಈ ಕಮಿಟಿಯಲ್ಲಿ ಆರ್ಕಿಟೆಕ್ಟ್, ಪ್ರಾಜೆಕ್ಟ್ ಮ್ಯಾನೇಜ್‌ಮೆಂಟ್ ಕನ್ಸಲ್‌ಟೆಂಟ್, ಗುತ್ತಿಗೆದಾರ, ಹಣಕಾಸು ಸಂಸ್ಥೆಯ ಪ್ರತಿನಿಧಿ ಮತ್ತು ಹಂಚಿಕೆದಾರರ ಪ್ರತಿನಿಧಿಗಳಿರುತ್ತಾರೆ.
- ಟರ್ನ್‌ಕೀ ಗುತ್ತಿಗೆ ಮಾಡುವಾಗ 2 ವರ್ಷದ ದೋಷ ನಿವಾರಣ ಹೊಣೆಗಾರಿಕೆ ಮತ್ತು ಇದೇ ವೇಳೆಯಲ್ಲಿ ನೈಜ ವೆಚ್ಚದ ಆಧಾರದ ಮೇಲೆ ಒಂದು ವರ್ಷದ ಅವಧಿಗೆ ಕಸ ವಿಲೇವಾರಿ, ಬೀದಿ ದೀಪ ಮತ್ತು ರಸ್ತೆ ನಿರ್ವಹಣೆ, ನೀರು ಪೂರೈಕೆ, ಬಡಾವಣೆಯ ಸುರಕ್ಷತೆ ಮತ್ತು ಮಾಲಿನ್ಯ ನಿರ್ವಹಣೆಗಳನ್ನು ಮಾಡುವಂತೆ ಒತ್ತಾಯಿಸಲಾಗುವುದು.
- ಕೆಲಸ ಬೇಗನೆ ಪೂರೈಸುವ ಗುತ್ತಿಗೆದಾರರಿಗೆ ಪ್ರೋತ್ಸಾಹಧನ: ವಿಳಂಬದಾರರಿಗೆ ದಂಡ ವಿಧಿಸಲಾಗುವುದು.
- ಮೂರನೇ ವ್ಯಕ್ತಿ ತಪಾಸಣೆ.
- ಹಂಚಿಕೆಗೆ ಮೊದಲೇ ಕರಾರುವಕ್ಕಾದ ಹಂಚಿಕೆ ದರವನ್ನು ಮಂಡಳಿಯು ತಿಳಿಸುವುದು.
- ಹೆಚ್ಚುವರಿ ಐಟಂಗಳನ್ನು ಮತ್ತು ವರ್ಕ್ ಸ್ಲಿಪ್ ಕೆಲಸಗಳನ್ನು ಸ್ವೀಕರಿಸುವುದಿಲ್ಲ. ಯಾವುದೇ ಟೈಮ್ ಅಂಡ್ ಕಾಸ್ಟ್ ಓವರ್ ರನ್ ಇರುವುದಿಲ್ಲ.

4. ಈ ಯೋಜನೆಯ ವಿಶೇಷತೆಯಾಗಿ ನಿವೇಶನ/ಮನೆಯ ದರವನ್ನು ಪಾವತಿಸಲು ಹಂಚಿಕೆದಾರರಿಗೆ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುವುದು.

- ವಿಜೇತ ಹಂಚಿಕೆದಾರರು ನಿವೇಶನ/ಮನೆಯ ದರವನ್ನು ಆರು ಕಂತುಗಳಲ್ಲಿ ಆರು ತಿಂಗಳುವರೆವಿಗೂ ಪಾವತಿಸಬಹುದಾಗಿದೆ.
- ಸಾಲ ಸೌಲಭ್ಯವನ್ನು ವಾಣಿಜ್ಯ ಬ್ಯಾಂಕ್‌ಗಳ ಸಹಯೋಗದೊಂದಿಗೆ ಒದಗಿಸಲಾಗುವುದು.
- ಯೋಜನೆಯ ಮುಕ್ತಾಯದ ಮುನ್ನ ಹಂಚಿಕೆದಾರರನ್ನು ಗುರ್ತಿಸಿ, ಹಂಚಿಕೆ ಮಾಡಲಾಗುವುದು. ಹಂಚಿಕೆದಾರರ ಪ್ರತಿನಿಧಿ ಪ್ರಾಜೆಕ್ಟ್ ಮಾನಿಟರಿಂಗ್ ಕಮೀಟಿಯ ಸದಸ್ಯರಾಗಿದ್ದು, ಯೋಜನೆಯ ಮುಕ್ತಾಯ ಸಂದರ್ಭದಲ್ಲಿ ಇದು ಕಸ್ಟಮರ್ ಆಡಿಟ್‌ಗೆ ಅನುವಾಗುವುದು.
- ಶೇಕಡ 100 ರಷ್ಟು ಮೊತ್ತವನ್ನು ಯೋಜನೆಯ ಪ್ರಾರಂಭದಲ್ಲಿ ಪಾವತಿ ಮಾಡುವವರಿಗೆ ವಿಶೇಷ ಪ್ರೋತ್ಸಾಹಗಳನ್ನು ನೀಡಲಾಗುವುದು.

**ವಾಸದ ಘಟಕಗಳ ವಿವರಗಳು ಈ ಕೆಳಗಿನಂತಿದೆ.**

| ಕ್ರಮ ಸಂಖ್ಯೆ | ವರ್ಗ | ಮಾಸಿಕ ವರಮಾನ ರೂ. ಗಳಲ್ಲಿ | ನಿವೇಶನ ಅಳತೆ ಅಡಿಗಳಲ್ಲಿ | ಫ್ಲಿಂತ್ ಏರಿಯಾ | ಅಂದಾಜು ಬೆಲೆ | ವಸತಿ ಸ್ಥಳಾವಕಾಶದ ವಿವರಗಳು |
|---|---|---|---|---|---|---|
| A | LIG | 2100–1500 | 30 X 40 | 450 | 4.00 ಲಕ್ಷ | 2 ಬೆಡ್ ರೂಮ್, ಹಾಲ್, ಕಿಚನ್ |
| B | MIG | 4500–7500 | 30 X 50 | 700 | 5.00 ಲಕ್ಷ | 2 ಬೆಡ್ ರೂಮ್, ಹಾಲ್, ಕಿಚನ್, ಡೈನಿಂಗ್, ಪೂಜ, ಸ್ಟೋರ್ |
| C | HIG | 7500 ಮೇಲೆ | 40 X 60<br>50 X 80 | 1000 – 1200 | 8–10 ಲಕ್ಷ | 3 ಬೆಡ್ ರೂಮ್, ಹಾಲ್, ಕಿಚನ್, ಡೈನಿಂಗ್, ಪೂಜ, ಸ್ಟೋರ್ |

ಮೇಲಿನ ಜೊತೆಗೆ, ತಾಲ್ಲೂಕು ಮತ್ತು ಜಿಲ್ಲಾ ಕೇಂದ್ರಗಳಲ್ಲಿ ನಿವೇಶನ ಮತ್ತು ಸೇವೆಗಳ ಯೋಜನೆಗಳನ್ನು ಸಹಾ ಕೈಗೊಳ್ಳಲು ಉದ್ದೇಶಿಸಿದೆ. ಇದು ಪ್ರಸ್ತಾಪಿತ ಪಟ್ಟಣಗಳಲ್ಲಿ ಬೇಡಿಕೆಯನ್ನು ತಿಳಿಯಲು ಮಾಡಿರುವ ಬೇಡಿಕೆ ಸರ್ವೆ ಮತ್ತು ವರ್ಗೀಕೃತವಾರು ಬೇಡಿಕೆಯ ಮೇಲೆ ಆದಾರಿಸಿದೆ. ತಾಲ್ಲೂಕು ಕೇಂದ್ರಗಳಲ್ಲಿ 500 ಮತ್ತು ಜಿಲ್ಲಾ ಕೇಂದ್ರಗಳಲ್ಲಿ 1000 ನಿವೇಶನಗಳನ್ನು ಅಭಿವೃದ್ಧಿ ಪಡಿಸುವ ಯೋಜನೆ ಇದೆ.

ದೊಡ್ಡ ಪ್ರಮಾಣದಲ್ಲಿ ವಸತಿ ಯೋಜನೆಗಳಲ್ಲಿ ಜನತೆ ಒಡನಾಟವನ್ನು ಹೆಚ್ಚಿಸಲು/ಪ್ರತ್ಸಾಹಿಸಲು ಯೋಜನೆಗಳನ್ನು ಖಾಸಗಿಯವರ ಸಹಭಾಗಿತ್ವದ ಜಂಟಿ ಯೋಜನೆಗಳನ್ನು ಕೈಗೊಳ್ಳಲು ಉದ್ದೇಶಿಸಿದೆ. ಸುವರ್ಣ ಕರ್ನಾಟಕ ಯೋಜನೆಗಳಡಿಯಲ್ಲಿ ಜಂಟಿ ಸಹಭಾಗಿತ್ವದ ಯೋಜನೆಗಳಿಗೆ ಮಾರ್ಗ ಸೂಚಿಗಳು ಈ ಕೆಳಕಂಡಂತಿರುತ್ತವೆ.

- ಸರ್ಕಾರದಿಂದ ಅನುಮೋದನೆಗೊಳ್ಳುವಂತಹ ಮಾರ್ಗಸೂಚಿಗಳನ್ವಯ ಮಂಡಳಿ ಜಂಟಿ ಸಹಭಾಗಿತ್ವದ ಯೋಜನೆಗಳನ್ನು ಕೈಗೊಳ್ಳಬಹುದಾಗಿದೆ.
- ಮಂಡಳಿಯು ಈ ಕೆಳಕಂಡ ಪರಿಸ್ಥಿತಿಗಳನ್ನು ಜಂಟಿ ಸಹಭಾಗಿತ್ವದ ಯೋಜನೆಗಳನ್ನು ಸರ್ಕಾರದ ಅನುಮೋದನೆಯ ನಂತರ ಕೈಗೊಳ್ಳಬಹುದಾಗಿದೆ.

1) ಖಾಸಗಿ ವ್ಯಕ್ತಿಗಳು ಅಭಿವೃದ್ಧಿಮಾಡಿದಂತಹ ಸ್ವತ್ತುಗಳನ್ನು ಮಾರುಕಟ್ಟೆ ಮಾಡಲು:
2) ಕ.ಗೃ.ಮಂಡಳಿ ಒಡೆತನದಲ್ಲಿರುವ ಭೂಮಿಯಲ್ಲಿ ಜಂಟಿ ಸಹಭಾಗಿತ್ವದ ಯೋಜನೆ:
3) ಖಾಸಗಿ ಅಭಿವೃದ್ಧಿದಾರ ಹೊಂದಿರುವಂತಹ ಭೂಮಿಯಲ್ಲಿ ಜಂಟಿ ಸಹಭಾಗಿತ್ವದ ಯೋಜನೆ.

ಕರ್ನಾಟಕ ಗೃಹ ಮಂಡಳಿಯ ಯೋಜನೆಗಳು, ವಾಣಿಜ್ಯ ಬ್ಯಾಂಕುಗಳಿಂದ/ಹಣಕಾಸು ಸಂಸ್ಥೆಗಳಿಂದ ಪಡೆಯುವ ಸಾಲದಿಂದ ಹಣ ಪಡೆಯುವುದರಿಂದ ಸರ್ಕಾರದ ಹಣಕಾಸಿನ ಪಾಲ್ಗೊಳ್ಳುವಿಕೆಯು ಇರುವುದಿಲ್ಲ. ಸರ್ಕಾರದ ಖಾತರಿ ಅಗತ್ಯತೆ ಇರುವುದಿಲ್ಲ.

**ಕೆ. ಸುಬ್ಬಯ್ಯ**
ಪೀಠಾಧಿಕಾರಿ–3
ವಸತಿ ಇಲಾಖೆ

## ANNEXURE – 2

### SUVARNA KARNATAKA PROGRAMME

### 1. Proposed Housing Projects under Suvarna Karnataka (Housing) Programme

| Sl. No. | Place | District | Extent of land in Acres | Total No. of plots | No. of sites | No. of houses | Project cost in lakhs including cost of land |
|---|---|---|---|---|---|---|---|
| 1 | Attibele Hobli, Sarjapura Hobli | Bangalore Urban | 300.00 | 4200 | 3780 | 420 | 23940.00 |
| 2 | Hesaraghatta Hobli, Bangalore North Tq. | Bangalore Urban | 300.00 | 4200 | 3780 | 420 | 23940.00 |
| 3 | Jigani Hobli, Anekal Tq. | Bangalore Urban | 300.00 | 4200 | 3780 | 420 | 23940.00 |
| 4 | Tavarekere Hobli, Bangalore South | Bangalore Urban | 200.00 | 2800 | 2520 | 280 | 15960.00 |
| 5 | Nelamanagala | Bangalore Urban | 50.00 | 700 | 630 | 70 | 3990.00 |
| 6 | Bidadi | Bangalore Rural | 100.00 | 1400 | 1260 | 140 | 3980.00 |
| 7 | Doddaballapur | Bangalore Rural | 100.00 | 1400 | 1260 | 140 | 3980.00 |
| 8 | Hoskote | Bangalore Rural | 100.00 | 1400 | 1260 | 140 | 3980.00 |
| 9 | Ramanagar | Bangalore Rural | 20.00 | 280 | 250 | 30 | 570.00 |
| 10 | Kolar | Kolar | 20.00 | 280 | 250 | 30 | 570.00 |
| 11 | Tiptur | Tumkur | 26.78 | 375 | 340 | 35 | 740.00 |

| | | | | | | | |
|---|---|---|---|---|---|---|---|
| 12 | Kelakote-Madakaripura, Chitradurga | Chitradurga | 29.45 | 410 | 370 | 40 | 820.00 |
| 13 | Shikharipura | Shimoga | 10.00 | 140 | 125 | 15 | 285.00 |
| 14 | Shimoga | Shimoga | 50.00 | 700 | 630 | 70 | 1400.00 |
| 15 | Chamanahalli | Mandya | 14.75 | 205 | 185 | 20 | 410.00 |
| 16 | Mandya | Mandya | 20.00 | 280 | 250 | 30 | 570.00 |
| 17 | Gundlupet | Mysore | 42.00 | 590 | 530 | 60 | 1190.00 |
| 18 | Hunsur | Mysore | 10.14 | 140 | 125 | 15 | 290.00 |
| 19 | Mysore | Mysore | 200.00 | 2800 | 2520 | 280 | 5600.00 |
| 20 | Nanjangudu | Mysore | 20.00 | 280 | 250 | 30 | 570.00 |
| 21 | Chamarajnagar | Chamarajnagar | 10.00 | 140 | 125 | 15 | 285.00 |
| 22 | Kushalnagar | Kodagu | 17.67 | 250 | 225 | 25 | 500.00 |
| 23 | Channarayapatna | Hassan | 10.00 | 140 | 125 | 15 | 285.00 |
| 24 | Chickmagalore | Chickmagalore | 10.00 | 140 | 125 | 15 | 285.00 |
| 25 | Kotekar, Mangalore | DK | 16.50 | 230 | 205 | 25 | 475.00 |
| 26 | Amtadi | DK | 6.24 | 85 | 75 | 10 | 185.00 |
| 27 | Udupi | Udupi | 10.00 | 140 | 125 | 15 | 285.00 |
| 28 | Bhatkal | Uttara Kannada | 10.00 | 140 | 125 | 15 | 285.00 |
| 29 | Kumta | Uttara Kannada | 10.00 | `140 | 125 | 15 | 285.00 |
| 30 | Amaragol-Hubli | Dharwad | 129.00 | 1800 | 1620 | 180 | 3610.00 |
| 31 | D N Koppa | Dharwad | 10.00 | 140 | 125 | 15 | 285.00 |
| 32 | Gadag | Gadag | 10.00 | 140 | 125 | 15 | 285.00 |
| 33 | Ranebennur | Haveri | 45.00 | 630 | 565 | 65 | 1270.00 |
| 34 | Savanur | Haveri | 5.35 | 75 | 67 | 8 | 155.00 |
| 35 | Bagalkot | Bagalkot | 10.00 | 140 | 125 | `15 | 285.00 |
| 36 | Mahalingapura, Mudhol | Bagalkot | 20.00 | 280 | 250 | 30 | 570.00 |
| 37 | Kundwad | Dhavangere | 260.00 | 3640 | 3280 | 360 | 7260.00 |
| 38 | Harihara Anagavadi | Dhavangere | 9.18 | 130 | 118 | 12 | 255.00 |
| 39 | Belgaum, Benakanahalli | Belgaum | 25.00 | 350 | 315 | 35 | 700.00 |
| 40 | Kudachi, Belgaum | Belgaum | 100.00 | 1400 | 1260 | 140 | 2800.00 |
| 41 | Raybag | Belgaum | 10.00 | 140 | 125 | 15 | 285.00 |
| 42 | Bijapura | Bijapura | 10.00 | 140 | 125 | 15 | 285.00 |
| 43 | Halladhakeri, Bidar | Bidar | 23.50 | 330 | 295 | 35 | 670.00 |
| 44 | Hoovanahadagali | Bellary | 10.00 | 140 | 125 | 15 | 285.00 |
| 45 | Dharwad | Dharwad | 20.00 | 280 | 250 | 30 | 570.00 |
| 46 | Thoranagallu | Bellary | 10.00 | 140 | 125 | 15 | 285.00 |
| 47 | Thakkalekoti, Siraguppa | Bellary | 10.00 | 140 | 125 | 15 | 285.00 |
| 48 | Devadurga | Raichur | 10.00 | 140 | 125 | 15 | 285.00 |
| 49 | Koppal | Koppal | 10.00 | 140 | 125 | 15 | 285.00 |
| 50 | Gangavathi | Koppal | 13.21 | 185 | 165 | 20 | 380.00 |
| | | **Total** | **2763.76** | **38685.00** | **34785.00** | **3900.00** | **140685.00** |

**II. Joint Venture Projects:**

Karnataka Housing Board (KHB) will also be undertaking joint venture projects as per the approved guide lines of the Government in the KHB lands as well as in the lands owned/offered by the Private Enterpreneurs and Developers depending up on the viability of the projects.

**Note:** 50 places indicated are tentative and the programme is subject to availability of lands during implementation and confirmed demand.

**ಕೆ. ಸುಬ್ಬಯ್ಯ**

ಪಿ.ಆರ್. 371 ಪೀಠಾಧಿಕಾರಿ–3, ವಸತಿ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಸರ್.ಎಂ. ವಿಶ್ವೇಶ್ವರಯ್ಯ ಮುಂದುವರಿದ ಬಡಾವಣೆಗೆ ನೀರು ಸರಬರಾಜು ಕಲ್ಪಿಸುವ ಸಲುವಾಗಿ ಹಾಗೂ ನೆಲಮಟ್ಟ ನೀರು ಶೇಖರಣಾ ಘಟಕ ಹಾಗೂ 150 ಅಡಿ ರಸ್ತೆ ನಿರ್ಮಾಣಕ್ಕಾಗಿ/ಸ್ಥಾಪಿಸಲಿಕ್ಕಾಗಿ ಹೇರೋಹಳ್ಳಿ ಗ್ರಾಮದ ಸರ್ವೆ ನಂ37, 39, 40, 51, 52/2 ಹಾಗೂ 36ರಲ್ಲಿನ ಒಟ್ಟು 20 ಎಕರೆ 18 ಗುಂಟೆ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳುವ ಯೋಜನೆಗೆ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರ ಪತ್ರ ಅ.ಸ.ಪತ್ರ ಸಂಖ್ಯೆ:ಬೆಂಅಪ್ರಾ/ಭೂಸ್ವಾ/1815/2010–11, ದಿನಾಂಕ:4–11–2010

2) ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರ ಪತ್ರ ಸಂಖ್ಯೆ:ಬೆಂಅಪ್ರಾ/ಭೂಸ್ವಾಅ/504/2010–11, ದಿನಾಂಕ:06–04–2011

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಸರ್.ಎಂ.ವಿಶ್ವೇಶ್ವರಯ್ಯ ಮುಂದುವರೆದ ಬಡಾವಣೆಗೆ ನೀರು ಸರಬರಾಜು ವ್ಯವಸ್ಥೆ ಕಲ್ಪಿಸುವ ಸಲುವಾಗಿ ಭೂಮಟ್ಟ ಜಲಾಶಯ ನಿರ್ಮಿಸಲು ಹಾಗೂ ಈ ಬಡಾವಣೆಗೆ 150 ಅಡಿ ರಸ್ತೆಯನ್ನು ಗಿಡದಕೊನೇನಹಳ್ಳಿ ರಸ್ತೆಯಿಂದ ಮಾಗಡಿ ರಸ್ತೆವರೆಗೆ ನಿರ್ಮಿಸಲು ಅವಶ್ಯವಾದ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಲು ಪ್ರಾಧಿಕಾರದ ಸಭೆಯ ವಿಷಯ ಸಂಖ್ಯೆ:329/2010, ದಿನಾಂಕ 25-9-2010ರಂದು ಮೆ:ಜಮನ್ ಲಾಲ್ ಬಜಾಜ್ ಸೇವಾ ಟ್ರಸ್ಟ್‌ನ ಹೇರೋಹಳ್ಳಿ ಗ್ರಾಮದ ಸರ್ವೆ ನಂ.37, 39, 40, 51 ಮತ್ತು 52/2ರಲ್ಲಿನ ಜಮೀನುಗಳಲ್ಲಿ ಒಟ್ಟು 17 ಎಕರೆ 38 ಗುಂಟೆ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಲು ತೀರ್ಮಾನಿಸಿದ್ದು, ಅದರಂತೆ ಪ್ರಾಧಿಕಾರದ ಕಾಯ್ದೆ ಕಲಂ 15 ರಂತೆ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡಲು ಕೋರಿರುತ್ತಾರೆ.

ಮುಂದುವರೆದು, ಓದಲಾದ (2)ರ ಪತ್ರದಲ್ಲಿ ಪ್ರಾಧಿಕಾರದ ವಿಷಯ ಸಂಖ್ಯೆ 51/11, ದಿನಾಂಕ 15-2-2011 ರಲ್ಲಿ ಮೆ: ಜಮನ್ ಲಾಲ್ ಬಜಾಜ್ ಸೇವಾ ಟ್ರಸ್ಟ್‌ನ ಹೇರೋಹಳ್ಳಿ ಗ್ರಾಮದ ಸರ್ವೆ ನಂ.37, 39, 40, 51 ಮತ್ತು 52/2ರಲ್ಲಿನ ಜಮೀನುಗಳು ಸೇರಿ 20 ಎಕರೆ 14 ಗುಂಟೆ ಹಾಗೂ ಸರ್ಕಾರಿ ಪೊಲೀಸ್ ಸ್ಟೇಷನ್ ಇರುವ ಸರ್ವೆ ನಂ.36ರಲ್ಲಿ 0-04 ಗುಂಟೆ ಒಟ್ಟು 20 ಎಕರೆ 18 ಗುಂಟೆ ಜಮೀನನ್ನು ಪರಿಷ್ಕೃತ ಯೋಜನೆಗೆ ಜಮೀನುಗಳನ್ನು ಭೂಸ್ವಾಧೀನಪಡಿಸಿಕೊಳ್ಳಲು ಅವಶ್ಯವಿರುವುದಾಗಿ ತೀರ್ಮಾನಿಸಲಾಗಿರುತ್ತದೆ. ಈ ಯೋಜನೆಗೆ ತಗಲುವ ವೆಚ್ಚ ರೂ.4200.00 ಲಕ್ಷಗಳನ್ನು ಪ್ರಾಧಿಕಾರದ ಸಂಪನ್ಮೂಲಗಳಿಂದ ಭರಿಸುವುದಾಗಿ ತಿಳಿಸಿ, ಒಟ್ಟು 20 ಎಕರೆ 18 ಗುಂಟೆ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳುವ ಸಂಬಂಧ ಬೆಂಗಳೂರು ಅಭಿವೃದ್ಧಿ ಕಾಯ್ದೆ ಕಲಂ 17(1)ರಂತೆ ಪ್ರಾರಂಭಿಕ ಅಧಿಸೂಚನೆ ಹೊರಡಿಸಲು ಪ್ರಾಧಿಕಾರದ ಕಾಯ್ದೆ ಕಲಂ 15 ರಂತೆ ಯೋಜನೆಗೆ ಅನುಮೋದನೆ ನೀಡಲು ಕೋರಿರುತ್ತಾರೆ. ಸರ್ಕಾರವು ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 02ಬೆಂಭೂಸ್ವಾ 2011, ಬೆಂಗಳೂರು, ದಿನಾಂಕ : 28-01-2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ ಸರ್.ಎಂ.ವಿಶ್ವೇಶ್ವರಯ್ಯ ಮುಂದುವರೆದ ಬಡಾವಣೆಗೆ ನೀರು ಸರಬರಾಜು ವ್ಯವಸ್ಥೆ ಕಲ್ಪಿಸುವ ಸಲುವಾಗಿ ಭೂಮಟ್ಟ ಜಲಾಶಯ ನಿರ್ಮಿಸಲು ಹಾಗೂ ಈ ಬಡಾವಣೆಗೆ 150 ಅಡಿ ರಸ್ತೆಯನ್ನು ಗಿಡದಕೊನೇನಹಳ್ಳಿ ರಸ್ತೆಯಿಂದ ಮಾಗಡಿ ರಸ್ತೆವರೆಗೆ ನಿರ್ಮಿಸಲು ಅವಶ್ಯವಾದ ಈ ಕೆಳಕಂಡ 20 ಎಕರೆ 18 ಗುಂಟೆ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಕಾಯ್ದೆ 17 (1)ರಡಿಯಲ್ಲಿ ಪ್ರಾರಂಭಿಕ ಅಧಿಸೂಚನೆ ಹೊರಡಿಸಲು ಪ್ರಾಧಿಕಾರದ ಕಾಯ್ದೆ ಕಲಂ 15ರ ಪ್ರಕಾರ ಯೋಜನೆಗೆ ಅನುಮೋದನೆ ನೀಡಿ ಆದೇಶಿಸಿದೆ.

| ಕ್ರ.ಸಂ | ಖಾತೆದಾರರ ಹೆಸರು | ಸರ್ವೆ ನಂ. | ಒಟ್ಟು ವಿಸ್ತೀರ್ಣ ಎ-ಗು | ಸ್ವಾಧೀನಪಡೆಯುವ ವಿಸ್ತೀರ್ಣ |
|---|---|---|---|---|
| 1 | ಸರ್ಕಾರಿ ಪೊಲೀಸ್ ಸ್ಟೇಷನ್ ಇರುತ್ತೆ | 36 | 0-19 | 0-04 |
| 2 | ಜಮನ್ ಲಾಲ್ ಬಜಾಜ್ ಸೇವಾ ಟ್ರಸ್ಟ್ | 37 | 9-30 | 2-39 |
| 3 | ಜಮನ್ ಲಾಲ್ ಬಜಾಜ್ ಸೇವಾ ಟ್ರಸ್ಟ್ | 39 | 5-16 | 1-28½ |
| 4 | ಜಮನ್ ಲಾಲ್ ಬಜಾಜ್ ಸೇವಾ ಟ್ರಸ್ಟ್ | 40 | 8-29 | 2-18 |
| 5 | ಜಮನ್ ಲಾಲ್ ಬಜಾಜ್ ಸೇವಾ ಟ್ರಸ್ಟ್ | 51 | 1-12 | 0-24½ |
| 6 | ಜಮನ್ ಲಾಲ್ ಬಜಾಜ್ ಸೇವಾ ಟ್ರಸ್ಟ್ ಕಮಲನಯನ ಬಜಾಜ್ | 52/2 | 52-35 | 12-24 |
| | **ಒಟ್ಟು** | | | **20-18** |

ಸದರಿ ಕಾಮಗಾರಿಗೆ ತಗಲುವ ಅಂದಾಜು ರೂ.4200.00 ಲಕ್ಷಗಳು (ನಾಲ್ಕು ಸಾವಿರದ ಇನ್ನೂರು ಲಕ್ಷ ರೂ.ಗಳು ಮಾತ್ರ) ವೆಚ್ಚವನ್ನು ಪ್ರಾಧಿಕಾರದ ಸಂಪನ್ಮೂಲಗಳಿಂದಲೇ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಚಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

ಪಿ.ಆರ್.480

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** 2011-12ನೇ ಸಾಲಿನಲ್ಲಿ 5ನೇ ಸಣ್ಣ ನೀರಾವರಿ ಗಣತಿ ಕಾರ್ಯವನ್ನು ಕೈಗೊಳ್ಳಲು ರಾಜ್ಯ ಮತ್ತು ಜಿಲ್ಲಾ ಮಟ್ಟದ ಸಮನ್ವಯ ಸಮಿತಿಗಳನ್ನು ರಚಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 55 ಆವಿಸಂ 2011, ದಿನಾಂಕ 22.10.2011.
2. ಮುಖ್ಯ ಅಭಿಯಂತರರು, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು, ಇವರ ಪತ್ರ ಸಂಖ್ಯೆ:ಮುಸದ/ಸಾಂಖ್ಯಿಕ/28/5ನೇ ಗಸಸ/2011/3699, ದಿನಾಂಕ 23.11.2011.

**ಪ್ರಸ್ತಾವನೆ :**

5ನೇ ಸಣ್ಣ ನೀರಾವರಿ ಗಣತಿ ಕಾರ್ಯವನ್ನು 2011-12ನೇ ಸಾಲಿನಲ್ಲಿ ಕೈಗೊಳ್ಳಲು ಮುಖ್ಯ ಅಭಿಯಂತರರು, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರನ್ನು ಗಣತಿಯ ಆಯುಕ್ತರನ್ನಾಗಿ ಮತ್ತು ಜಂಟಿ ನಿರ್ದೇಶಕರು (ಸಾಂಖ್ಯಿಕ) ಮುಖ್ಯ ಅಭಿಯಂತರವರ ಕಛೇರಿ, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರನ್ನು ನೋಡಲ್ ಅಧಿಕಾರಿಯನ್ನಾಗಿ ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ದಿನಾಂಕ 22.10.2011ರ ಸರ್ಕಾರದ ಆದೇಶದಲ್ಲಿ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯದಲ್ಲಿ 5ನೇ ಸಣ್ಣ ನೀರಾವರಿ ಗಣತಿ ಕಾರ್ಯವನ್ನು ಕ್ರಮಬದ್ಧವಾಗಿ ಹಾಗೂ ಯಶಸ್ವಿಯಾಗಿ ನಡೆಸಲು ಸೂಕ್ತ ಮಾರ್ಗದರ್ಶನ ಮತ್ತು ಕಾಲಾನುಕ್ರಮ ಪರಿಶೀಲನೆಯ ಅಗತ್ಯವಿರುವುದರಿಂದ ರಾಜ್ಯ ಮಟ್ಟದಲ್ಲಿ ಮತ್ತು ಜಿಲ್ಲಾ ಮಟ್ಟದಲ್ಲಿ ಸಮನ್ವಯ ಸಮಿತಿಗಳನ್ನು ರಚಿಸುವ ಅವಶ್ಯಕತೆ ಇದೆ ಎಂದು ಮುಖ್ಯ ಅಭಿಯಂತರರು, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ 23.11.2011ರ ಪತ್ರದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದ ಸಮನ್ವಯ ಸಮಿತಿಯನ್ನು ಮತ್ತು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಸಮನ್ವಯ ಸಮಿತಿಯನ್ನು ರಚಿಸಿ, ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 66 ಆವಿಸಂ 2011 ಬೆಂಗಳೂರು, ದಿನಾಂಕ: 17ನೇ ಜನವರಿ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, 5ನೇ ಸಣ್ಣ ನೀರಾವರಿ ಗಣತಿ ಕಾರ್ಯವನ್ನು ಕ್ರಮಬದ್ಧವಾಗಿ ಮತ್ತು ಯಶಸ್ವಿಯಾಗಿ ನಿರ್ವಹಿಸುವ ಸಲುವಾಗಿ ಸೂಕ್ತ ಮಾರ್ಗದರ್ಶನ ನೀಡಲು ಹಾಗೂ ಕಾಲಾನುಕ್ರಮ ಪರಿಶೀಲನೆ ನಡೆಸಲು ಈ ಕೆಳಗೆ ನಮೂದಿಸಿರುವ ಅಧಿಕಾರಿಗಳನ್ನೊಳಗೊಂಡಂತೆ ರಾಜ್ಯ ಹಾಗೂ ಜಿಲ್ಲಾ ಮಟ್ಟದ ಸಮನ್ವಯ ಸಮಿತಿಯನ್ನು ರಚಿಸಲಾಗಿದೆ.

**ರಾಜ್ಯ ಮಟ್ಟದ ಸಮನ್ವಯ ಸಮಿತಿ:**

| | | |
|---|---|---|
| 1 | ಸರ್ಕಾರದ ಅಪರ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರು | ಅಧ್ಯಕ್ಷರು |
| 2 | ಸರ್ಕಾರದ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) | ಸದಸ್ಯರು |
| 3 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ. | ಸದಸ್ಯರು |
| 4 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ | ಸದಸ್ಯರು |
| 5 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 6 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ | ಸದಸ್ಯರು |
| 7 | ಸರ್ಕಾರದ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ | ಸದಸ್ಯರು |
| 8 | ಪ್ರಧಾನ ಅಭಿಯಂತರರು, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ವಿಭಾಗ | ಸದಸ್ಯರು |
| 9 | ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ | ಸದಸ್ಯರು |
| 10 | ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ | ಸದಸ್ಯರು |
| 11 | ಮುಖ್ಯ ಅಭಿಯಂತರರು (ಸಾಮಾನ್ಯ) ಕೆ.ಪಿ.ಟಿ.ಸಿ.ಎಲ್ | ಸದಸ್ಯರು |
| 12 | ಮುಖ್ಯ ಅಭಿಯಂತರರು ಹಾಗೂ ಗಣತಿ ಆಯುಕ್ತರು, ಸಣ್ಣ ನೀರಾವರಿ (ದಕ್ಷಿಣ) ಬೆಂಗಳೂರು | ಸದಸ್ಯರು |
| 13 | ಮುಖ್ಯ ಅಭಿಯಂತರರು, ಸಣ್ಣ ನೀರಾವರಿ (ಉತ್ತರ) ಬಿಜಾಪುರ | ಸದಸ್ಯರು |
| 14 | ಜಂಟಿ ನಿರ್ದೇಶಕರು (ಸಾಂಖ್ಯಿಕ ಕೋಶ) ಸಣ್ಣ ನೀರಾವರಿ (ದ) ಬೆಂಗಳೂರು | ಸದಸ್ಯ-ಕಾರ್ಯದರ್ಶಿ |

ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ 5ನೇ ಸಣ್ಣ ನೀರಾವರಿ ಗಣತಿಯ ಕಾರ್ಯದ ಸೂಕ್ತ ಮೇಲ್ವಿಚಾರಣೆಗಾಗಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ಜಿಲ್ಲಾ ಮಟ್ಟದ ಸಮನ್ವಯ ಸಮಿತಿಯನ್ನು ರಚಿಸಲಾಗಿದೆ.

**ಜಿಲ್ಲಾ ಮಟ್ಟದ ಸಮನ್ವಯ ಸಮಿತಿ:**

| | | |
|---|---|---|
| 1 | ಜಿಲ್ಲಾಧಿಕಾರಿ | ಅಧ್ಯಕ್ಷರು |
| 2 | ಜಿಲ್ಲಾ ಮುಖ್ಯ ಕಾರ್ಯನಿರ್ವಹಣಾಧಿಕಾರಿ | ಉಪಾಧ್ಯಕ್ಷರು |
| 3 | ಕಾರ್ಯಪಾಲಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ | ಸದಸ್ಯ-ಕಾರ್ಯದರ್ಶಿ |
| 4 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ | ಸದಸ್ಯರು |
| 5 | ಕಾರ್ಯಪಾಲಕ ಅಭಿಯಂತರರು, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ | ಸದಸ್ಯರು |
| 6 | ಹಿರಿಯ ಭೂವಿಜ್ಞಾನಿ, ಗಣಿ ಮತ್ತು ಭೂ ವಿಜ್ಞಾನ ಇಲಾಖೆ | ಸದಸ್ಯರು |
| 7 | ಜಿಲ್ಲಾ ಮಟ್ಟದ ಅಧಿಕಾರಿಗಳು, ಕೆ.ಪಿ.ಟಿ.ಸಿ.ಎಲ್ | ಸದಸ್ಯರು |
| 8 | ಕಾರ್ಯಪಾಲಕ ಅಭಿಯಂತರರು, ಜಲಸಂಪನ್ಮೂಲ ಇಲಾಖೆ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 378

ಜಲ ಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)